ಲ್ಯಾಸಿಯಮ್ ಗ್ರಂಥಮಾಲೆಯ ದ್ವಿತೀಯ ಕುಸುಮ

# ಕಂಡೂ ಕಾಣದ ನೋಟಗಳು

(ಸಣ್ಣ ಕತೆಗಳ ಸಂಗ್ರಹ)

ಶ್ರೀ ಅ. ನ. ಕೃಷ್ಣರಾಯರ
ಮುನ್ನುಡಿಯೊಡನೆ

ಉಡುಪಿಯ ವಿವಿಧ ಕತೆಗಾರರು

ನವಂಬರ್ ೧೯೪೧ ಬೆಲೆ ಆರಾಣೆ

ಬನ್ನಿ!' ಎನ್ನುತ್ತ ಹಕ್ಕಿ ಹಾರಿದಂತೆ ಕೋಣೆಗೆ ಹೋಗಿ ಮಗ್ಗುಲಿನ ಅಡಿಗೆಯು ಮನೆಯನ್ನು ಹೊಕ್ಕಳು. ಸರಾಫರು ಕೋಣೆಯೊಳಹೊಕ್ಕು ಎಂದಿನಂತೆ ಅಲ್ಲಿದ್ದ ಕುರ್ಚಿಯಲ್ಲೋ ವಿರಾಮಾಸನದಲ್ಲೋ ಒರಗಿದ್ದಿರಬಹುದು. ಇಲ್ಲಿಂದದು ಕಾಣಲಿಲ್ಲ. ಆಕೆ ಬೆಳ್ಳಿಯ ಲೋಟೆಯೊಂದನ್ನು ಹೊರತಂದು ಅವಸರವಸರವಾಗಿ ತೊಳೆದು ನೀರು ಚೆಲ್ಲಿ ಒಳಹೋದಳು. ಹಿಂಡಿದೊಂದು ಲಿಂಬೆಯ ಹಣ್ಣು ಅಂಗಳದಲ್ಲಿ ಬಿತ್ತು ಅನಂತರವೇನಾಯಿತೋ ಅವಳಿಗೆ. ಚಟ್ಟನೆ ಹೊರಹಾರಿದಳು— ಜಾರಿದ್ದ ಸೆರಗನ್ನು ಸರಿಗೈದುಕೊಂಡು ಹೊರಗೆ ಬಾಗಿಲ ಬಳಿಯಲ್ಲಿ ಗೋಡೆಗೊರಗಿ ತಲೆಬಾಗಿ ನಿಂತಳು. ಒಮ್ಮೆ ಕಾಲು ನೆಲವನ್ನು ಕೆರೆಯುತ್ತಿದ್ದರೆ ಮತ್ತೊಮ್ಮೆ ಕೊನೆಸೆರಗು ಬೆರಳನ್ನು ಸುತ್ತುತ್ತಲಿತ್ತು. ಅವನು ಒಳಗಿಂದಲೆ ಏನೋ ಹೇಳುತ್ತಿದ್ದಿರಬೇಕು. ಇವಳು ಕೇಳುತ್ತ ದೀನ ನಿಸ್ಸಹಾಯ ದೃಷ್ಟಿಯಿಂದ ಒಂದೊಂದು ಸಲ ಆತನ ಕಡೆಗೆ ನೋಡುತ್ತಿದ್ದಳು. ಒಮ್ಮೊಮ್ಮೆ ನಸುನಗುತ್ತಲೆ ತಲೆಯೊಲೆದೊಲೆದು ಸವಿನಯ ನಿರಾಕರಣೆಯನ್ನು ಸೂಚಿಸುತ್ತಿದ್ದಳು. ಆ ಪಾಪಿಯು ಏನೇನು ಹೇಳುತ್ತಿದ್ದನೋ! ತನಗಾಕೆ ಒಲಿಯದಿದ್ದರೆ ತನ್ನ ಮುನಿಸಿಂದ ಅವರ ಭಾವೀ ಜೀವನದುಸಿರನ್ನೇ ಸಿಲ್ಲಿಸಿಬಿಡುವೆನೆಂದನೋ, ಎಂತೆಂತಹ ಪ್ರಲೋಭನೆಗಳನ್ನು ತೋರಿದನೋ, ಏನೇನು ಆಶೆಗಳನ್ನು ಬೀರಿದನೋ! ಆದರೆ ಅವನೇನೆಂದರೂ ಬೈದು ಭಂಗಿಸಿ ರೇಗಿ ಕೂಗಿ ರಂಬಾಟವೆಬ್ಬಿಸುವ ಹಾದಿ ಹಿಡಿಯಲಿಲ್ಲ ಅವಳು. ಧನಿಯಲ್ಲವೆ? ತಮ್ಮ ಭವಿಷ್ಯ ಅವನ ಕೈಯಲ್ಲಿಲ್ಲವೇ? ಅದು ಕಾರಣ ಹುಬ್ಬು ಗಂಟಿಕ್ಕದೆ ಕಣ್ಣು ಕೆರಳಿಸದೆ ತನ್ನ ದೀನ ನಮ್ರ ಮೃದುಮಂದಹಾಸದ ಸವಿನಯ ನಿರಾಕರಣೆಯ ನಿಟ್ಟಿಂದ ನಿಲುವಿಂದ ಬೇಡಿಬೇಡಿ ಮಣಿಮಣಿದು "ದಮ್ಮಯ್ಯ, ಕಾಡಬೇಡೀ, ದಯಮಾಡಿ ತೆರಳಿ" ಎಂದು ತಿರುತಿರುಗಿ ಅಂಗಲಾಚಿ ಯಾಚಿಸುವಂತಿತ್ತು ಅವಳ ಕರುಣಾಜನಕ ಮುಖಮುದ್ರೆ. ಆದರೆ ಅವಳ ಆ ವರ್ತನೆಯಲ್ಲಿ ಪ್ರಬಲ ನಿರೋಧವಿಲ್ಲೆಂದು ತಿಳಿದನೋ, ಸನ್ನಿವೇಶ ಸಹಜವಾದ ನಸುಭಯ ಸಂಕೋಚಗಳಿಂದ ಕಳವಳಗೊಂಡಿರು

ವಳೆಂದು ಬಗೆದನೋ, ಬಾಗಿಲ ಬಳಿಯಿದ್ದವಳನ್ನು ಫಕ್ಕನೆ ಕೈಹಿಡಿದೊಳ ಗೆಳದೇ ಬಿಟ್ಟ ಆ ನರಾಧಮ! ಅವಳು ಗೋಡೆಗೊರಗಿದ್ದ ನಿಲುವು ಬಲ ವತ್ತರವಾದ ಆ ಸೆಳೆತವನ್ನು ತಾಳಿ ನಿಲ್ಲುವಂತಿದ್ದಿಲ್ಲ. "ರಾಮ ರಾಮಾ" ಎನ್ನುತ್ತ ಕಿಟಿಕಿಯೆಡೆಯಿಂದ ದೃಷ್ಟಿ ತೆಗೆದು ಬಂದು ವಿರಾಮಾಸನ ದಲ್ಲೊರಗಿ ಬಿಟ್ಟೆ. ಅನಿರೀಕ್ಷಿತವಾಗಿ ಅಷ್ಟೊಂದು ತೀವ್ರಗತಿಯಲ್ಲಿ ಬಂದೊದಗಿದ ಸನ್ನಿವೇಶದಿಂದ ಅವಳಿಗಾಗಿದ್ದಂತೆ ನನಗೂ ಕರ್ತವ್ಯ ಮೌಢ್ಯ ಬಂದಿತ್ತು. ಸುಮ್ಮನೆ ಕುಳಿತುಬಿಟ್ಟೆ. ತಿರುಗಿ ಕಿಟಿಕಿಯ ಬಳಿಗೆ ಹೋದೆ. ಆ ಪಾಪಿಯು ಹೊರಬಂದ, ಹೊರಟುಹೋದ. ಆದರೆ ಆಕೆಯು ಸುಳಿವಿದ್ದಿಲ್ಲ. ಎಷ್ಟೋ ಹೊತ್ತಿನ ಮೇಲೆ ಹೊರ ಬಂದಳು. ಕನಸಾ ಮನಸಾ ಯೋಚಿಸದ ಅತ್ಯಾಚಾರದ ಆಕಸ್ಮಿಕ ಸಂಘಟನೆಯು ಇರುಬಿನಲ್ಲಿ ಹಠಾತ್ತಾಗಿ ಸಿಕ್ಕಿ ಹೊರಬಿದ್ದು ಪರಿತಪಿಸುತ್ತಿರುವ ಆ ಮುಗ್ಧೆಯು ಕರುಣಾ ಜನಕ ಚಿತ್ರ! ಅಯ್ಯೋ ಎನಿಸುವಂತಿದೆ, ನೋಡಿಲ್ಲಿ!

"ಆಯಿತು! ಮುಗಿಯಿತು! ನನ್ನ ಕಣ್ಣು, ನನ್ನ ಕೆಮರಾ ಇನ್ನೀ ಕಿಟಿಕಿಯಿಂದ ಹೊಂಚುಹಾಕುವ ಸುಯೋಗಕ್ಕೆಲ್ಲ ತಿಲಾಂಜಲಿ! ಎಂದು ಕೊಂಡೆ. ನಾನಾವ ಸುಂದರಮೂರ್ತಿಯನ್ನು ದಿವ್ಯಕಲೆಗೆ ಭವ್ಯ ಭಾವನೆಗೆ ನೆಲೆಯೆಂದು ಉಚ್ಚಾಸನದಲ್ಲಿಟ್ಟು ಆರಾಧಿಸುತ್ತಿದ್ದೆನೋ ಅದನ್ನಾ ತುಚ್ಛನು ಧೂಳಿಗೆಸೆದು ಹೋಗಿದ್ದ. ಮನಮರುಗುತ್ತ ಹೊರಹೊರಟೆ. ಎಲ್ಲೆಲ್ಲೋ ಸುತ್ತಿಸುತ್ತಿ ನಿರ್ಜನ ಪ್ರಶಾಂತ ಪ್ರದೇಶದಲ್ಲಿ ಕುಳಿತೆ. ಏನೇನೋ ಯೋಚನೆಗಳು ಹೊಳೆದುವು. ನಾನು ಕಂಡುದು ಕಡಿಮೆ; ಊಹಿಸಿದುದು ಹೆಚ್ಚು; ಪರಾಮರ್ಶಿಸಿದುದು ಇಲ್ಲ, ನನ್ನದು ತಳವಿಲ್ಲದ ಕಲ್ಪನೆಯಾಗಿರ ಲೊಲ್ಲದೇಕೆ?— ಎಂದಿತು ವಿವೇಕ ಬುದ್ಧಿಯೋ ಅಳಿಯಾಶೆಯೋ ಯಾವುದೋ ಒಂದು ನನ್ನೊಳಗಿಂದ.

"ಆ ಆಶಾತಂತುವಿನಿಂದಾದ ಸಮಾಧಾನದಿಂದ ರಾತ್ರೆ ನಿದ್ದೆಹಿಡಿದಿತ್ತು. ಆದರೆ ಬಡಿದೆಬ್ಬಿಸಿದಂತಾಯಿತು. ಆ ಹೊರಬಾಗಿಲಿಗಾರೋ ಬಲವಾಗಿ

ಒದ್ದಿರಬೇಕು. ಕಿವಿಗೊಟ್ಟಾಲ್ಕೈಸಿದೆ— 'ಏನು? ನಿಜವಾಗಿಯೂ ಬಾಗಿಲು ತೆರೆವುದಿಲ್ಲವೇ?' ಎಂಬ ಕೋಪದ ಪ್ರಶ್ನೆ. 'ಆಗೇನೋ ಅವಿಚಾರದಿಂದ ಹಾಗಾಯಿತು. ಇನ್ನುಬೇಡ. ದಮ್ಮಯ್ಯ! ಕಾಡಬೇಡಿ, ಹಿಂದೆ ಹೋಗಿ' ಆಕೆಯ ದೀನ ಉತ್ತರವದು. 'ಈಗ ವಿಚಾರ ಬಂದಿದೆಯೆ? ಹಾಗಾದರೆ ಚೆನ್ನಾಗಿ ವಿಚಾರಿಸು— ಆಗ ಹೇಳಿದುದೆಲ್ಲ ಗಾಳಿಗೆ ಹೋಗಿಲ್ಲವಷ್ಟೆ! ಕೊನೆಯ ಮಾತಾಗಿ ತಿರುಗಿ ಹೇಳುತ್ತೇನೆ. ನನ್ನನ್ನು ಹಿಂದಟ್ಟುವ ದಿಟ್ಟತನ ನಿನ್ನಲ್ಲಿದ್ದರೆ, ನಿನ್ನ ಗಂಡನನ್ನು ನೆರೆಮನೆಗಟ್ಟುವ ಪಂಥ ನನಗಿದೆ!' ಎಂದಾತನ ತರ್ಜನೆ.

"ತೆರೆಯದ ಬಾಗಿಲು ಗರ್‍ರನೆ ತೆರೆಯಿತು' ನನ್ನೆದೆಯನ್ನು ನರ್‍ರನೆ ಇರಿಯಿತು! ಪರಾಮರ್ಶಿಸುವ ಅವಶ್ಯವಿಲ್ಲವೆಂದಾಯಿತು.

"ಮೂರು ದಿನ ಆ ಕಡೆ ನೋಡಲಿಲ್ಲ. ನಾಲ್ಕನಯ ದಿನ ಕಿಟಿಕಿಯನ್ನು ತೆರೆದೆ. ಆಕೆ ಹಾಸಿಗ ಹಿಡಿದಿದ್ದಿರಬೇಕು, ಗಂಡನೇ ಮನೆಗೆಲಸ ಮಾಡುತ್ತಿದ್ದ! ಅಂದು ಸಾಯಂಕಾಲ ನನ್ನ ಕ್ಲಬ್ಬಿನ ಗೆಳೆಯನಾದ ಡಾಕ್ಟರ್ ಉಮೇಶನಲ್ಲಿಗೆ ಹೋದಾಗ ಆಕೆಯ ಗಂಡ ಮೂರ್ತಿಮತ್ತಾದ ಖಿನ್ನತೆಯಂತೆ ಅಲ್ಲಿಂದ ಹೊರಬರುತ್ತಿದ್ದ. ಕಾರಣವನ್ನು ಉಮೇಶನೊಡನೆ ಕೇಳಿದೆ. ಅವನೆಂದ— 'ನಿನ್ನ ನೆರೆಮನೆಯಲ್ಲೇನಾಗುತ್ತಿದೆಯೆಂದು ನಿನಗೆ ಗೊತ್ತಿಲ್ಲವಲ್ಲ! ಆತನ ಹೆಂಡತಿಗೆ ಹಿಸ್ಟಿರಿಯಾ! ಅದೊಂದು ಮಾನಸಿಕ ರೋಗ. ಹೆಂಗಸಿನ ಕೋಮಲ ಮನಸ್ಸು ಆಕಸ್ಮಿಕವಾಗಿ ತೀವ್ರಯಾತನೆಯ ಆಘಾತ (a severe mental shock)ಕ್ಕೆ ಈಡಾದರೆ ಹಾಗಾಗುತ್ತೆ. ಇವಳದೇನೋ ಕಠಿಣ ರೀತಿಯದು. ಅದರ ಚಿಕಿತ್ಸೆ ಮದ್ರಾಸಿನಲ್ಲೇ ಆಗಬೇಕಾಗಿದೆ. ಕಾಸಿಲ್ಲ ಅವನ ಕೈಯ್ಯಲ್ಲಿ. ಧನಿಯೊಡನೆ ಪರಿಸ್ಥಿತಿ ಹೇಳಿ ಕಣ್ಣೀರಿಟ್ಟು ಸಾಲ ಬೇಡಿದರೆ ನಾಸ್ತಿಯೆಂದನಂತೆ!'

"ಆದರೂ ಬಿಡಾರ ಮುಚ್ಚಿ ಪಾತ್ರೆಪರಡಿಗಳನ್ನು ಮಾರಿ ಆಕೆಯನ್ನು ಮದ್ರಾಸಿಗೆ ಕೊಂಡೊಯ್ದು ಬಿಟ್ಟು ಬಂದ ಗುಣಮುಖವಾಗಿ ಬಂದಳೆ

ಎಚ್ಚರಿಕೆಯಿಂದ ತಿರುಗಿ ಹೊಸ ಬದುಕನ್ನು ಹೂಡಿಯಾಳೆಂಬ ಆಶೆಯಿತ್ತು ನನಗೆ. ಆದರೆ . ಆದರೆ . . ಶ್ಯಾಮೂ . ಇಂದವಳ ಇಹ ಲೀಲೆ ಮುಗಿಯಿತೆಂದು ತಂತಿ! ನನ್ನ ಆರಾಧ್ಯದೇವಿಯ ದೇಹಕ್ಕೆ ಅಲ್ಲಿಂತಹ ಅಂತ್ಯವಿಧಿಯಾಯಿತೋ! ಈ ಸಂಪುಟಕ್ಕಾದರೂ ಕಣ್ಣೀರ ತರ್ಪಣದಿಂದ ಅಗ್ನಿಸಂಸ್ಕಾರವಾಗಲಿ!" ಎಂದು ಮಾಧುವು ಕಣ್ಣೀರು ಮಿಡಿಯುತ್ತ ಬಾಗಿಲಿಗೆ ಅಗಳಿಯಿಕ್ಕಿದ. ಸಂಪುಟಕ್ಕೆ ತೈಲಾಭಿಷೇಕಗೈದ. ಮೊಣಕಾಲೂರಿ ಕೈಮುಗಿದು ಅಗ್ನಿಪ್ರತಿಷ್ಠೆ ಮಾಡಿದ. ನನ್ನ ಕಣ್ಣೂ ಹನಿಯಿಕ್ಕಿತು; ನಾನೂ ಕೈಮುಗಿದು ನಿಂತುಬಿಟ್ಟೆ.



# ಹಣ್ಣು ಮಾರುವವಳು

ಶ್ರೀ ಕೆ. ವಿಠಲ ಶೆಣೈ, ಬಿ. ಎ, ಎಲ್. ಟಿ.

★

ಇವರೂ ನಮ್ಮ ಜಿಲ್ಲೆಯ ಬೋರ್ಡ್ ಹಾಯರ್‌ಸ್ಕೂಲ್ ಅಧ್ಯಾಪಕರಾಗಿರುವ ತರುಣರು. ಕಾಲೇಜು ವಿದ್ಯಾರ್ಥಿಯಾಗಿದ್ದಾಗಲೆ ಅನೇಕ ಕತೆಗಳನ್ನು ಬರೆದಿದ್ದಾರೆ ಈಚೆಗಂತೂ ಜಿಲ್ಲೆಯ 'ಧುರೀಣ' 'ಅಂತರಂಗ' 'ನವಯುಗ' ಮುಂತಾದ ಪತ್ರಿಕೆಗಳಲ್ಲಿ ಅನೇಕ ಸಣ್ಣ ಕತೆಗಳನ್ನು ಬರೆದಿದ್ದಾರೆ ಇವರ ಈ ಕತೆಯನ್ನು ಪ್ರಕಟಿಸುತ್ತಾ 'ಧುರೀಣ' ಪತ್ರಿಕೆಯ ಸಂಪಾದಕರು "ಇವರು ಉದಯೋನ್ಮುಖರೆ ಆಗಿದ್ದಾರೆ ಕನ್ನಡದ ಅಭಿಮಾನಿಗಳೆ ಆಗಿದ್ದಾರೆ ಶ್ರೀಯುತರ ಕಥನಕಲೆ ಎಷ್ಟು ಕುಸುರುಗೊಂಡಿದೆಯೆಂಬುದಕ್ಕೆ 'ಹಣ್ಣು ಮಾರುವವಳು' ಎಂಬ ಕತೆಯೆ ಸಾಕ್ಷಿ ಶ್ರೀಯುತರ ಲೆಕ್ಕಣಿಕೆಯ ಭವಿಷ್ಯ ಬಹಳ ಒಳ್ಳೆಯದಾಗಿದೆ ದಕ್ಷಿಣ ಕನ್ನಡ ಜಿಲ್ಲೆ ಇನ್ನೊಬ್ಬ ಒಳ್ಳೆಯ ಕತೆಗಾರರನ್ನು ಸಂಪಾದಿಸಿಕೊಂಡಿತು ಎಂಬುದು ನಮಗೆ ಆನಂದದ ಸಂಗತಿಯಾಗಿದೆ " ಎಂದು ಉಲ್ಲೇಖಿಸಿದ್ದಾರೆ ಶ್ರೀಯುತರ ಭಾಷೆ ನಯವಾಗಿದೆ ನಿರೂಪಣೆಯಲ್ಲಿ ಸಹಜತೆಯಿದೆ ಜನ ಜೀವನದ ಆಶೆ ಆಕಾಂಕ್ಷೆಗಳ ಮೆಚ್ಚು ಹುಚ್ಚುಗಳ ರಹಸ್ಯವನ್ನು ಸ್ವಾರಸ್ಯವಾಗಿ ಚಿತ್ರಿಸುವ ಜಾಣ್ಮೆ ಇವರಲ್ಲಿದೆ ಈ ಲಕ್ಷಣ ವಿಶೇಷಗಳನ್ನು ಈ ಕತೆಯು ಚೆನ್ನಾಗಿಯೆ ತೋರಿಸುತ್ತದೆ

ನಡು ಹರೆಯದ ಹೆಂಗಸು. ತೀರಾ ಬಡವೆ. ಬಾಳ್ವೆಯ ಹೋರಾಟದ ತುಂಬಾ ಅನುಭವ ಅವಳಿಗಿದ್ದಿರಬಹುದು ಆ ಹರಕು ಸೀರೆ, ಕೊಳಕು ರವಕೆ, ಎಣ್ಣೆಯಿಲ್ಲದೆ ಕೆದರಿದ ಕುರುಳು—ಇವು ಆಕೆಯ ಒಡಲಿನ ಬಡ ತನದ ಬೇಗೆಯನ್ನು ಒಡೆದು ತೋರಿಸುತ್ತಿವೆ.

ಬಿಸಿಲ ಭರದಿಂದಿರಬಹುದು—ಪಾಪ! ಮೊದಲೆ ಮುಪ್ಪಿನ ನೆರಳು ಮುಸುಕಿರುವ ಆ ಹಣೆಯಲ್ಲಿ ಅಲ್ಲಲ್ಲಿ ಕೆಲವು ಬೆವರ ಹನಿಗಳು ಮೂಡಿವೆ.

ಲೋಕದ ಗೋಚರಕ್ಕೆ ಬಾರದ ಹಂಗಸು ಆಕೆಯ ನೊಂಟ ದಲ್ಲೊಂದು ಬುಟ್ಟಿ. ಅದರಲ್ಲಿ ಹಾಸಿದ ಹುಲ್ಲ ಮೇಲೆ ಕೆಲವು ಮಾವಿನ ಹಣ್ಣುಗಳು—ನುವಾರು ಐವತ್ತು ಇರಬಹುದು. ಅಷ್ಟೆ ಬಿಸಿಲಲ್ಲಿ, ನಡುಬೀದಿಯಲ್ಲಿ, ಚೆನ್ನಾಗಿ ದಣಿದವಳಂತೆ ಮುಂದಡಿಯಿಡುತಿದ್ದಾಳೆ. ನಿಮಿಷಕ್ಕೊಮ್ಮೆ ಬೀದಿಯ ಎರಡೂ ಕಡೆಗಳಿಗೆ ನೋಟವನ್ನು ಬೀರುತಿದ್ದಾಳೆ. ಎಲ್ಲಾದರೂ ಮಕ್ಕಳು "ಅವ್ವಾ, ಹಣ್ಣು ನೋಡು—ಹಣ್ಣು" ಎಂದು ಬೆರಳೆತ್ತಿ ಬುಟ್ಟಿಯನ್ನು ತೋರಿಸಿದರೆ ಮೊದಲೆ ಉದಾಸೀನಳಾಗಿ ಮುಂದೊತ್ತುವ ತನ್ನ ನಡೆಯನ್ನು ಮತ್ತಷ್ಟು ತಡೆಗಟ್ಟುತಿದ್ದಾಳೆ. ಏಕೆ? ತನ್ನ ಮತ್ತು 'ಹಸಿವು, ಹಸಿವು' ಎಂದು ಗೋಳಿಡುವ ಆ ಎಳೆಗೂಸುಗಳ ಪುಣ್ಯದಿಂದ ಪುಣ್ಯಾತ್ಮನೊಬ್ಬನು ಗಿರಾಕಿಯಾದಾನೆ ಎಂದು.

"ಹಣ್ಣು, ಹಣ್ಣು" ಎಂದು ಯಾರೊ ಕರೆದಿರಬೇಕು. ಹೆಂಗಸು ನಿದ್ದೆಯಿಂದ ಎಚ್ಚತ್ತವಳಂತೆ ಒಮ್ಮೆ ಹಿಂದಿರುಗಿ ನೋಡಿದಳು. ಹೌದು- ನರೆತ ಮುದುಕರೊಬ್ಬರು ಕರೆಯುತಿದ್ದಾರೆ. ಬಡವೆಯ ಆನಂದವೆ ಉಕ್ಕಿ ಕಿರುನಗೆಯಾಗಿ ಆ ಒಣ ತುಟಿಗಳಲ್ಲಿ ಹೊರಸೂಸಿತು.

"ಎಷ್ಟೇ ಹಣ್ಣು— ಕಾಲಾಣೆಗೆ?"

"ಐವತ್ತಿವೆ. ರಾಯ್ರೆ—ಎಂಟಾಣೆಕೊಡಿ."

"ಐವತ್ತು ಗ್ರೈವತ್ತು ಬೇಡ. ನಾಲ್ಕಕ್ಕೇನು ಹೇಳು."

"ಎಂಟಾಣೆ ಎನೆದು. ಬುಟ್ಟಿಯನ್ನು ಬರಿದುಮಾಡಿದರೆ, ಹಣ್ಣು ಗಳೊಂದಿಗೆ ಎರಡು ಹಸುಗೂಸುಗಳಿಗೆ ಅನ್ನಕೊಟ್ಟ ಭಾಗ್ಯವೂ ತಮ್ಮ ದಾಗುತಿತ್ತು!"

"ಮತ್ತೆಲ್ಲಾ ಒಣಹರಟೆ. ಮೊದಲು ನಾಲ್ಕಕ್ಕೇನು ಹೇಳು!"

"ಒಂಬತ್ತು ಕಾಸು ಬಿನಾಡಿ ಸ್ವಾಮಿ."

"ಆರು ಕಾಸಿಗಾದರೆ ಇರಲಿ. ಇಲ್ಲವಾದರೆ ಬೇಡ."

"ಸಾಲದು ರಾಯ್ರೆ. ಬಡವೆ. ಸ್ವಲ್ಪ . "

ಮುದುಕರ ತಾಳ್ಮೆಯು ಒಸರು ಅಲ್ಲಿಗೇ ಬತ್ತಿತು ಅವರು ಊಟ ಕ್ಕೆಂದು ಹೊರಟರು. ಹೆಂಗಸಿಗೂ ತಾನು ಹಟಹಿಡಿದು ಪ್ರಯೋಜನವಿಲ್ಲ ವೆಂದು ಮನಗಂಡಿತು. ಅರೆಮನಸ್ಸಿನಿಂದ "ಸರಿ, ಅಷ್ಟಾದರೆ ಅಷ್ಟು. ಕೊಂಡುಕೊಳ್ಳಿರಿ ರಾಯ್ರೆ" ಎಂದಳು ಆಕೆ.

"ಬೇಸರಿಸಿ ನನ್ನುಪಕಾರಕ್ಕೆ ಕೊಡಬೇಕೆಂದಿಲ್ಲ".— ನಿಷ್ಠುರದ ನುಡಿಯೊಂದಿಗೆ ಆರು ಕಾಸು ಚೆಲ್ಲಿ ಮುದುಕರು ಹಣ್ಣುಹಿಡಿದು ಒಳಗೆ ಹೋದರು.

ಹೆಂಗಸು ಮುಂಬರಿಯುತ್ತ ಮುಂದಿನ ಸಾಲೆಯ ಸನಿಹಕ್ಕೆ ಬಂದಳು. ಅಲ್ಲಿ ಗೇಟಿನ ಬಳಿಯಲ್ಲಿ ಐದಾರು ಹುಡುಗರು ನಗುತ್ತ ಕಿರಿಚುತ್ತ ನಿಂತಿದ್ದಾರೆ.

"ಕಾಫಿಯಿಲ್ಲದಿದ್ದರೆ ಪರವಾಯಿಲ್ಲ. ಒಂದೊಂದು ಮಾವಿನಿಂದಾ ದರೂ ಬಾಯಿ ಸಿಹಿ ಮಾಡವ್ವಾ!" ಎಂದನವರಲ್ಲೊಬ್ಬ.

"ಕಾಫಿಗೆ ಪಂಥದಲ್ಲಿ ಸೋತು ಮಾವಿನ ಹಣ್ಣಿನಲ್ಲಿ ಸುಧಾರಿಸಿ ಬಿಡುವುದೆ?— ಉಹುಂ." ಎಂದನು ಮತ್ತೊಬ್ಬ.

"ಪಾಪ! ಮಾತಿನ ಬಲೆಯಲ್ಲಿ ಸಿಕ್ಕಿದನೆಂದು, ಸೋತುದಕ್ಕೆ ಹೆಚ್ಚು ಪೀಡಿಸಬಾರದು. ಮಾವಾದರೆ ಮಾವು—ಹೊಟ್ಟೆ ತುಂಬಿದರೆ ಸರಿಯಷ್ಟೆ?" ಎಂದನು ಕರುಣಾಳು ಬೇರೊಬ್ಬ.

ಅಂತೂ ಹೆಂಗಸಿನ ಮತ್ತು ಆಕೆಯ ಆ ಬಡಮಕ್ಕಳ ಅದೃಷ್ಟದಿಂದ ಪಂಥದಲ್ಲಿ ಸೋತವನು ಒಪ್ಪಿದ. ಒಮ್ಮೆಲೇ ಎಲ್ಲರೂ ನೊಣಗಳಂತೆ ಬುಟ್ಟಿಗೆ ಮುತ್ತಿಗೆ ಹಾಕಿದರು. ಕಾಸಿನ ಪ್ರಯಾಸವಿಲ್ಲದೆ ಹೆಂಗಸಿನ ಆರು ಹಣ್ಣುಗಳು ಮಾರಿಹೋದುವು. ಆಕೆ ಸೊಂಟಕ್ಕೆ ಬಿಗಿದಿದ್ದ ಆ ಕಂದು ಬಣ್ಣದ ಹರಕು ಚೀಲದಲ್ಲಿ ಮುದುಕರ ಆರು ಕಾಸುಗಳೊಂದಿಗೆ ಮಕ್ಕಳ ಒಂದಾಣೆಯೂ ಬಿತ್ತು.

ಹೆಂಗಸಿನ ಮನಸ್ಸಿನಲ್ಲಿ ಸಾಲೆಯ ಬಳಿಯಲ್ಲೇ ಕುಳಿತರೆ ಹಣ್ಣೆಲ್ಲಾ ಮಾರಾಟವಾಗಿ ಹೋಗಬಲ್ಲುದೆಂಬ ಆಸೆಯು ಬೇರುಬಿಟ್ಟಿತು. ಗೇಟಿನ ಎದುರು, ಮರದ ಬುಡದಲ್ಲಿ, ನೆಲದ ಮೇಲೆ ಬುಟ್ಟಿಯನ್ನಿರಿಸಿ, ಆಕೆ ಸಮೀಪದಲ್ಲೆ ಕುಳಿತಳು.

ಹೆಚ್ಚು ಹೊತ್ತು ಸರಿಯಲಿಲ್ಲ. ಹುಡುಗರ ಇನ್ನೊಂದು ತಂಡವು ಹೆಂಗಸನ್ನಾವರಿಸಿತು. ಆದರೆ ಆ ತಂಡದಲ್ಲಿ ಕೆಲವು ಪುಂಡರಿದ್ದರೆಂಬುದು ಮಾತ್ರ ಆಕೆಗೆ ತಿಳಿದಿರಲಿಲ್ಲವೇನೊ! ತನ್ನ ಮಕ್ಕಳಂತೆಯೆ ಎಂಬ ಭಾವನೆ ಅವಳದಾಗಿದ್ದಿರಬೇಕು. ಹುಡುಗರಂತೂ ಬಡ ಹೆಂಗಸನ್ನು ಕೆಣಕಿಸಿ ಒಂದೊಂದಾಗಿಯೆ ಹಣ್ಣುಗಳನ್ನು ಜಾರಿಸತೊಡಗಿದರು. ಹೆಂಗಸು ರೇಗಿದಳು. ಆಕೆಯನ್ನು ಇನ್ನಷ್ಟು ರೇಗಿಸಿ ಬುಟ್ಟಿಯನ್ನೆ ಬಗಲಿಗೆ ಹೊಡೆಯಬೇಕೆಂದು ಹುಡುಗರಿದ್ದರು. ಅದೃಷ್ಟವಶಾತ್ ಅಧ್ಯಾಪಕರ ಆಗಮನವು ಅವರ ಮಹತ್ಕಾಂಕ್ಷೆಯನ್ನು ಮೊಳಕೆಯಲ್ಲೆ ಮುರಿದು ಬಿಟ್ಟಿತು.

ತುಂಟರ ತುಂಟತನದಿಂದ ಹೆಂಗಸು ಒಮ್ಮೆಗೆ ಪಾರಾದಳು. ನಿಟ್ಟುಸಿರೊಂದನ್ನು ಬಿಟ್ಟು, ಉಳಿದ ಹತ್ತಿಪ್ಪತ್ತು ಹಣ್ಣುಗಳೊಂದಿಗೆ ಆಕೆ ಮುನ್ನಡೆದಳು.

ಮುಂದೆ ಸಿಗುವುದೇ 'ಸರದಾರ ಭವನ'. ಅದರ ಗೇಟಿಗೆ ತಾಗಿ ಬಲಕ್ಕೆ ಒಂದು ಬೀಡಿಸಿಗರೇಟು ಮಾರಾಟದ ಅಂಗಡಿ. ಗೇಟಿನ ಎಡಕ್ಕೆ ದಾರಿಯ ಪಕ್ಕದಲ್ಲಿ ಕುಂಟರು, ಕುರುಡರು ತಪ್ಪಿದದಿಂದಿಲ್ಲ. "ಕಣ್ಣಿಲ್ಲ

ದೇವರೆ, ಕಾಸು ಕೊಡಿ" ಎಂದು ಕೂಗುವವನೊಬ್ಬ. "ಕಾಲುಬಾರದ ಕುಂಟ— ಧರ್ಮಹಾಕಿ ದೇವ್ರೆ" ಎಂದು ಗೋಳಿಡುವವನೊಬ್ಬ. ಕಲ್ಲೆದೆಯನ್ನಾದರೂ ಕರಗಿಸಬಲ್ಲ ಕರುಣಾಜನಕ ನೋಟವನ್ನು ಬೀರುವ ಮೂಕನೊಬ್ಬ,— ಇಂತಹರಲ್ಲಾರಾದರೊಬ್ಬನು ಭವನದಿಂದ ಹೊರಬರುವವರ ಕಣ್ಣಿಗೆ ಬೀಳದಿರುತ್ತಿರಲಿಲ್ಲ. ಅಂದು ಕಾಲಿಲ್ಲದ ಬಡ ಮಾನವ ಪ್ರಾಣಿಯೊಂದು ಅಲ್ಲೇ ನರಳಿ ಹೊರಳಿಕೊಂಡಿತ್ತು. ಅದರ ಮಗ್ಗುಲಲ್ಲೆ ಬುಟ್ಟಿಯನ್ನಿಟ್ಟು, ಹಣೆಯ ಬೆವರನ್ನೊಮ್ಮೆ ಒರಸಿತೆಗೆದು ಹೆಂಗಸು ಕುಳಿತುಕೊಂಡಳು.

ಭವನದಿಂದ ಹೊಟ್ಟೆತುಂಬಿ ತೇಗುತ್ತ ಹೊರಬಂದ ಮಹನೀಯರಲ್ಲಿ ಕೆಲವರು ಅತ್ತಿತ್ತ ನೋಡದೆ ಹೊರಟುಹೋದರು. ಕೆಲವರು ಅಂಗಡಿಯ ಸಾಹುಕಾರನಿಗೆ ಆರು ಕಾಸು ಬಿಸಾಡಿ, ಒಂದು 'ಗೋಲ್ಡ್ ಫ್ಲೇಕ್' ಕೊಂಡು, ಉಳಿದ ಕಾಸನ್ನೂ ಚೀಲದಲ್ಲಿ ಹಾಕಿ, ಸಿಗರೇಟಿನ ಹೊಗೆಬಿಡುತ್ತ ಹೊರಟುಹೋದರು. ಒಬ್ಬಿಬ್ಬ ದಯಾವಂತರು, ಸಿಗರೇಟಿನೊಂದಿಗೆ ಹಿಂದಕ್ಕೆ ಬಂದ ಚಿಲ್ಲರೆ ಕಾಸನ್ನು ಕುಂಟನು ನೆಲದ ಮೇಲೆ ಬಿಡಿಸಿಟ್ಟ ಆ ಕೊಳಕು ವಸ್ತ್ರದ ಮೇಲೆ ಬಿಸಾಡಿ ಹೋದರು. ಅಂತೂ ಹೆಂಗಸಿನ ಬುಟ್ಟಿಯ ಕಡೆಗೆ ದೃಷ್ಟಿ ಹೋದರೂ ಹೋಗದವರಂತೆ ಎಲ್ಲರೂ ದಾರಿನಡೆದರು.

ತಾಸೊಂದು ಕಳೆಯಿತು. ಬುಟ್ಟಿಯ ಹಣ್ಣುಗಳಲ್ಲೊಂದಾದರೂ ಕಡಿಮೆಯಾಗಲಿಲ್ಲ.

ಮಾನವಸ್ವಭಾವದ ಆಳವನ್ನು ಕಂಡವರಿಲ್ಲ. ಅಂತೆಯೇ ಆಶೆಯ ಬೆಳಕನ್ನು ನಿರಾಶೆಯ ಮೋಡಗಳು ಕವಿದಿರುವಾಗ, ಹೆಂಗಸಿನ ಮನೋವಾತಾವರಣದಲ್ಲೆದ್ದ ಭಾವಗಳ ಗತಿಯನ್ನು ಬಣ್ಣಿಸಲು ಬರುವಂತಿಲ್ಲ. ಪ್ರಪಂಚದಲ್ಲಿ ಕಾಯಕಷ್ಟದ ಹಿರಿಮೆಯು ಎಂದೊ ಮಾಯವಾಗಿದೆ ಎಂದಿರಬೇಕು ಆ ಮನಸ್ಸು. ಬಡವರ ಗೋಳಿಗೆ ಅದು ಕಿವುಡನಂತಿದೆ ಎಂದು ನೊಂದಿರಬೇಕು ಅದೇ ಮನಸ್ಸು. ಮಿಂಚಿನ ವೇಗದಿಂದ ಭಾವಗಳು ಒಂದರ ಮೇಲೊಂದು ಬಂದು ನಿರುಕ್ಷಣದಲ್ಲಿಯೆ ಮಾಯವಾದುವು.

ಬಡವೆಯ ನೋಟವು ಕುಂಟನ ಕೊಳಕು ವಸ್ತ್ರದೆಡೆಗೆ ಹೊರಳಿತು. ಅದರ ಮೇಲೆಲ್ಲ ತುಂಬಿರುವ ಕಾಸು ಕಾಲಾಣೆಗಳನ್ನು ಎಣಿಸತೊಡಗಿ

ದಳು ಆಕೆ. "ಆಹಾ, **ಮೂರಾಣೆ!** ಮುಂಜಾನೆಯಿಂದ ಮುಸ್ಸಂಜೆಯ ವರೆಗೆ ಹಗಲಿಡಿ ಮೈಮುರಿದು, ಬೆವರಿಳಿಸಿ, ನಾನು ಸಂಪಾದಿಸುವುದು ಬರೆ 'ಆಣೆ, ಎರಡಾಣೆ.' ಕುಂಟನಿಗೆ **ನಿರಾಯಾಸವಾಗಿ ಮೂರಾಣೆ!!....** ತನಗೂ ಕಾಲಲ್ಲದಿರುತಿದ್ದರೆ ...." ಈ ತೆರನಾದ ಹುಚ್ಚಾಸೆಯೊಂದು ಒಡನೆಯೆ ಆಕೆಯ ಅಂತರಂಗದಲ್ಲಿ ಅರಳಿತು. ತುಟಿಗಳಿಂದ ಮುಗುಳು ನಗೆಯೊಂದು ಚಿಮ್ಮಿತು.

ಹೆಂಗಸು ಮರಳಿ ಹೋಗಲನುವಾದಳು. ಬುಟ್ಟಿಯನ್ನು ಸೊಂಟಕ್ಕೇರಿಸಿ ದಾರಿಯ ನಡುವಿಗೆ ಬಂದಳು. 'ಮನೆಯ ಮಕ್ಕಳಿಗೆ ಬುಟ್ಟಿಯ ಮಾವುಗಳಲ್ಲದೆ ಕೂಳಿಗೇನು?' ಎಂಬ ಚಿಂತೆಯು ಮಾತ್ರ ಮನಸ್ಸನ್ನು ಮಮ್ಮಲ ನೋಯಿಸುತಿತ್ತು. ಭವನದ ಗೇಟಿನಿಂದ ಎಷ್ಟುದೂರ ಬಂದಳೊ, ಆಕೆಗೂ ತಿಳಿದಿರಲಾರದು. ಕಾರಿನ ಒಂದು ಹೊರ್ನು ಕೇಳಿಸಿತು. ಪಾಪ! ಸಮಾಧಿಗ್ರಸ್ತೆಯಾದ ಆಕೆಗೆ ಮಾತ್ರ ಅದು ಕೇಳಲಿಲ್ಲವೇನೊ!!

* * * *

ಹೆಂಗಸಿನ ಮನಸ್ಸಿನಲ್ಲಿ ಅಂದು 'ಸರದಾರ ಭವನ'ದ ಮುಂಗಡೆ ಕುಳಿತಾಗ ಮಿಂಚಿದ ಆಸೆಯು ಇಂದು ಈಡೇರಿದೆ. ಅದೇ 'ಸರದಾರ ಭವನ'ದ ಇನ್ನೊಂದು ಪಕ್ಕದಲ್ಲಿ ಕುಂಟಿಯೊಬ್ಬಳು ಗೋಳಿಡುತ್ತ ಜನರ ಕರುಣೆಯ ನೋಟವನ್ನು ಬೇಡುತಿದ್ದಾಳೆ. ತನ್ನಲ್ಲೆ ಒಮ್ಮೊಮ್ಮೆ ಅಂದಿನ ಸ್ವತಂತ್ರಜೀವನವನ್ನು ಇಂದಿನ ಪರತಂತ್ರಜೀವನದೊಂದಿಗೆ ತಕ್ಕಡಿಯಲ್ಲಿ ತೂಗಿ ನೋಡಿ ನಿಟ್ಟುಸಿರಿಡುತ್ತಿದ್ದಾಳೆ. ಚಿಂದಿಬಟ್ಟೆಯಲ್ಲಿ ಮಕ್ಕಳೆರಡು ಮಗ್ಗುಲಲ್ಲೆ ಕುಳಿತು ತಮ್ಮ ಪಾಲಿನ ರೋದನವನ್ನು ತಾಯಿಯ ದನಿಯೊಂದಿಗೆ ಜೊತೆಗೂಡಿಸುತ್ತಿವೆ.

ಸಂಕಷ್ಟಗಳ ಹೊಡೆತಕ್ಕೆ ಸಿಲುಕಿದ ಮನಸ್ಸು ಎಂತೆಂತಹ ವಿಲಕ್ಷಣ ಬಯಕೆಗಳಿಗೆ ಎಡೆಗೊಡುವುದುಂಟು! ಅವು ನೀರಮೇಲಿನ ಗುಳ್ಳೆಯಂತೆ ಹುಟ್ಟಿದಲ್ಲೆ ಅಳಿದರೆ ಸರಿ. ಅಡಿಮುಡಿಯಿಲ್ಲದ ಬಯಕೆಗಳಲ್ಲೊಂದು ತನ್ನಷ್ಟಕ್ಕೆ ಕೈಗೂಡಿದರೇನೆ 'ಎಂತಹ ಹುಚ್ಚಾಟವಿದು' ಎಂದು ಅರಿವಾಗುವುದಷ್ಟೆ!



# "ಫ್ಲಾಟ್ ಕಟ್"

ಕುಮಾರಿ ಕೆ. ವಿ. ಬಾಯಿ

★

ಇವರು ಗುಪ್ತನಾಮದಿಂದ ಮೊದಲಿಗೆ ಸಾಹಿತ್ಯ ಭೂಮಿಯಲ್ಲಿ ಕಾಲಿಟ್ಟರು ಹೊಸತಾಗಿಯೆ ಸಾಹಿತ್ಯ ಕ್ಷೇತ್ರದಲ್ಲಿ ವ್ಯವಸಾಯ ಮಾಡುವುದಾದರೂ ಇವರ ಕೈ ಪಳಗಿದ ಕೈ ಚಳಕವನ್ನೆ ತೋರಿಸುವುದನ್ನು ಕಂಡು ಕೌತುಕವುಂಟಾಗುತಿದೆ. ಕತೆಯ ಮಾತುಗಾರಿಕೆ, ಸನ್ನಿವೇಶ ಚಿತ್ರಣ, ರಸಪೋಷಕವಾದ ಭಾವ, ವ್ಯಂಜಕತೆ, ಇವೆಲ್ಲ ಕತೆಗಾರ್ತಿಯ ಮುಂದಿನ ಏಳಿಗೆಯನ್ನು ಸೂಚಿಸುತ್ತಿವೆ. ಇವರು ಸಣ್ಣ ಕತೆಗಳಲ್ಲಿ ಗಹನ ವಿಚಾರಗಳನ್ನು ಅರಿಸಿಕೊಳ್ಳದೆಯೆ ಜೀವನದ ಅನುದಿನದ—ಕ್ಷಣಕ್ಷಣದ ಚಿಕ್ಕ ಸನ್ನಿವೇಶಗಳನ್ನೆ ಎತ್ತಿಕೊಂಡು ಸರಸವಾಗಿ ಚಿತ್ರಿಸಬಲ್ಲರು ಎಂಬುದು ಈ ಕತೆಯಲ್ಲಿ ಚೆನ್ನಾಗಿ ಕಾಣುತ್ತಿದೆ.

"ಟೀ ಆರಿಹೋಗ್ತಾ ಇದೆ."

"ಕ್ಷಂ."

"ಕುಡೀರೀಂದ್ರೆ."

"ಹ್ಞೂಂ."

"ಇವತ್ತು ನಾ ಮಾಡಿದ್ದು ಟೀ."

"ಸಂತೋಷ."

"ನಮ್ಮ ಅಡಿಗಿಯಾಕಿ ಇವತ್ತು ಮನೆಗೆ ಹೋದ್ಲು."

"ಹೋಗಲಿ."

"ನಾಳೇನೂ ಬರೋದಿಲ್ಲವಂತೆ."

"ಬರುವುದು ಬೇಡ."

"ಅಡಿಗೆಗೇನು ಮಾಡಲಿ?"

"ಮಾಡು."

"ಅಡಿಗೀ ಮಾಡಿ ಅಭ್ಯಾಸಾನೆ ಇಲ್ಲ."

"ಅಭ್ಯಾಸ ಮಾಡು."

"ನಾ ಅಡಿಗೀ ಮಾಡಿದ್ರೆ ಉಣ್ಣೋರಾರು?"

"ನೀನು."

"ನೀವೊ?"

"ನಾನು."

"ಹೊರ ಕೆಲ್ಸದಾಕೀನೂ ಇವತ್ತು ಆಪ್ಸೆಂಟ್."

"ಹೂಂ."

"ಮನಿ ಕೆಲ್ಸಾನೆಲ್ಲ ಮುಗ್ಸಿ ಮತ್ತೆ ಅಡಿಗಿ ಮಾಡ್ಲೆ?"

"ನಿನ್ನ ಚಿತ್ತ."

"ತಡವಾದೀತು ಮತ್ತೆ."

"ಹೂಂ."

"ಇವತ್ತು ಭಾನುವಾರ ಹೇಗೂ ರಜೆಯಷ್ಟೆ."

"ಅಷ್ಟೆ ರಜೆ."

"ನಾ ಒಲೀಮುಂದೆ ಹೋದ್ರೆ..........."

"ಬಹಳ ಸಂತೋಷ."

"ಮೊನ್ನೆ ಆಚೆಮನಿ ಶಾರದಾಬಾಯಿಗೆ ಏನಾಯ್ತು ಗೊತ್ತೆ?"

"ಏನು?"

"ಅವರೆಂದೂ ಅಡಿಗಿ ಮಾಡಿದೋರಲ್ಲ."

"ಅಲ್ಲ."

"ಅವರ ತಂದಿಮನೆಯೋರು ತುಂಬಾ ಶ್ರೀಮಂತ್ರು."

"ಹೌದು."

"ಶಾರದಾಬಾಯಿ ಅವ್ರ ಮುದ್ದು ಮಗಳು."

"ಮುದ್ದು ಹೌದು."

"ಶಾರದಾಬಾಯಿ ಚಿಕ್ಕವ್ರಿದ್ದಾಗ ಸ್ಕೂಲಿಗೆ ಹೋಗ್ತಾ ಆಡ್ಕೊಂಡಿದ್ದವ್ರು."

"ಇರಬಹುದು."

"ಆಕಿಗೆ ಒಲೀ ಮುಂದೆ ಹೋಗಿ ಅಭ್ಯಾಸಾನೆ ಇಲ್ಲಾ."

"ಇಲ್ಲ."

"ಇಲ್ಲಿ ಅವರ ಗಂಡನ ಮನೆಯೋರೂ ಶ್ರೀಮಂತರು ತಾನೆ."

"ನಿಜ."

“ಮನೇಲಿ ಕೈಗೆ ಕಾಲ್ಗೆ ಜನಾ ಇಟ್ಟಿದ್ದಾರೆ ಅವ್ರ ಗಂಡ.”

“ಗಂಡ!”

“ಮೊನ್ನೆ ಯಜಮಾನ್ರಿಗೆ ಟೀ ಮಾಡ್ಕೊಡೋದಕ್ಕೆ ತಾನೆ ಒಲೀ ಮುಂದೆ ಹೋದ್ರಂತೆ.”

“ಉತ್ತಮ.”

“ಒಲೀ ಊದಿ ಕಣ್ಣು ಕೆಂಪ್ಗಾಯ್ತಂತೆ.”

“ಅಯ್ಯೊ!”

“ಬಿಸಿನೀರು ಸೋಸುವಾಗ ಬಿಸಿಪಾತ್ರಾನ್ನ ತಾಗಿಸಿಕೊಂಡು ಕೈ ಸುಟ್ಕೊಂಡ್ರಂತೆ.”

“ಪಾಪ!”

“ಕೊನೆಗೆ ಯಜ್ಮಾನ್ರು ಬಂದು ತಾವೇ ಟೀ ಮಾಡ್ಕೋಬೇಕಾಯ್ತಂತೆ.”

“ಶ್ರೇಯಸ್ಸು!”

“ಶಾರದಾಬಾಯಿಗೆ ಕಣ್ಣುನೋವು ವಾಸಿಯಾಗ್ಲೇ ಇಲ್ವಂತೆ.”

“ಛಿ!”

“ಕೊನೆಗೆ ಅವ್ರು ಐ ಟೆಸ್ಟ್ ಮಾಡ್ಸಿಕೋಬೇಕಾಯ್ತು.”

“ಕಷ್ಟ!”

“ಡಾಕ್ಟರರು ಸ್ಪೆಕ್ಸ್‌ನ್ನು ಪ್ರಿಸ್‌ಕ್ರೈಬ್ ಮಾಡಿದ್ರಂತೆ.”

“ಗ್ರಹಚಾರ!”

“ನಿನ್ನೆಯಿಂದ ಶಾರದಾಬಾಯಿ ಕನ್ನಡ್ಕ ಹಾಕ್ಕೊಳ್ತಿದಾರೆ.”

“ಹಾಕಿಕೊಳ್ಳಲಿ.”

“ಅವರ ಆ ಮುಖಕ್ಕೆ ಕನ್ನಡ್ಕ ಎಷ್ಟು ಚೆನ್ನಾಗಿ ಕಾಣ್ಸುತ್ತದೆ, ನೋಡಿದ್ದೀರಾ?”

“ನೋಡಿದ್ದೇನೆ.”

“ಅವರ ಆ ಅರಶಿನ ಶಿಲ್ಕಿಗೂ ಆ ಕನ್ನಡ್ಕಕ್ಕೂ ಜತೆ.”

“ಸರಿ ಮತ್ತೆ.”

“ಆ ಶೀರೇನ ಮೊನ್ನೆ ತಾನೆ ಕೊಂಡ್ಕೊಂಡದ್ದು.”

"ಇರಬಹುದು."

"ಬೆಲೆ ಕವ್ಮಿ."

"ಆಗಲಿ."

"ಬರಿ ಹದ್ನೆಂಟು ರೂಪಾಯಿ."

"ಹದಿನೆಂಟು ರೂಪಾಯಿ!"

"ಮೊನ್ನೆ ನಮ್ಮ ಸಮಾಜದಲ್ಲಿ ಜಾನಕೀಬಾಯಿ ಅಂಥಾದ್ದೆ ಶೀರೆ ಉಟ್ಟಿದ್ರು."

"ಉಡಲಿ!"

"ನಮ್ಮ ಸಮಾಜದವರ ಯುನಿಫಾರಮ್ ಅದೇ ಆ ಶೀರೆನೇ ಆಗ್ಬೇಕೂಂತ ಸರ್ವಾನುಮತದಿಂದ ಒಂದು ಠರಾವು ಪಾಸಾಗಿಬಿಟ್ಟಿದೆ."

"ಫೈಲಾಗ್ಬೇಕಿತ್ತು."

"ನಮ್ಮ ವಿಲಾಸಿನಿ ದೇವೀರ ಲೇಡಿಸ್ ಬ್ಯಾಗ್ ನೋಡಿದ್ದೀರಾ?"

"ನೋಡಿಲ್ಲ."

"ನನಗೊಂದು ಹೈಹೀಲ್ ಶೂಸ್ ತಗೋಬೇಕು."

"ಬೇಡ."

"ಬೇಕು ಈ ಸಾರಿ."

"ಬೇಡ."

"ಬ್ಯಾಗ್ ಒಂದು."

"ಬೇಡ."

"ಏನದು ಬರಿಯೋದು ಇಡೀದಿನ? ಒಮ್ಮೆ ತಲೆಯೆತ್ತಿ ಮಾತಾಡಿ."

"ಇಲ್ಲ. ಸಮಯವಿಲ್ಲ."

"ಮಾತಾಡ್ದಿದ್ರೆ ನಾ ಅಡಿಗೇನೇ ಮಾಡೋದಿಲ್ಲ."

"ಉಪವಾಸ ಕೂತ್ಕೊ."

"ತಿರಿಗಿ ಬರೀತೀರೊ? ಬರಿಯೊ ಕಾಗ್ದಾನೆಲ್ಲ ಹರಿದುಹಾಕಿ ಬಿಡ್ತೇನೆ ನೋಡಿ."

"ದಮ್ಮಯ್ಯ ಹರೀಬೇಡ. ಈಚೆ ತಾ. ಅದು ನಾ ಬರಿಯುತ್ತಿರೋ ಕತೆ."

"ಹಾಳಾಯ್ತು ಕತೆ! ನಾ ಹೇಳಿದ್ದನ್ನ ತಂದ್ಕೊಡ್ತೀರೊ? ಖಂಡಿತ ಹೇಳ್ಬಿಡಿ. ಇಲ್ಲಾದ್ರೆ ಈ ಕಾಗ್ದಾನ್ನೆಲ್ಲ ಹರಿದು ಒಲೀಗೆ ಹಾಕ್ತೇನೆ."

"ಬೇಡ ಮಾರಾಯ್ತಿ! ತಂದ್ಕೊಡ್ತೇನೆ. ಆ ಕಾಗ್ದಾನೆಲ್ಲಾ ಈಚೀ ಕೊಡು."

* * * *

"ಇವತ್ತೇನು? ಬಾಳಾ ನಗ್ತಾ ಇದ್ದೀರಿ?"

"ನಿನ್ನನ್ನು ನೋಡಿ ಸಂತೋಷದಿಂದ."

"ಗೊತ್ತೇ ಇದೆ ಆಡೋದೇ ಪೂರಾ ಸುಳ್ಳೂಂತ."

"ತಗೊ ನಿನ್ನ ಶೀರೆ, ಬ್ಯಾಗ್, ಶೂಸ್! ಇನ್ನಾದರೂ ನಾನು ಸತ್ಯವಂತನಷ್ಟೆ."

"ಹೋ... ..ಎಲ್ಲಾ ತಂದಿದ್ದೀರಿ! ನಾ ಹೇಳಿದ್ದ ಶೀರೇನೇ ಇದು! ಈ ಲೇಡಿಸ್ ಬ್ಯಾಗ್ ಎಷ್ಟು ಚೆನ್ನಾಗಿದೇಂತೀರಿ?"

"........ .............."

"ಅಯ್ಯೋ! ಮೊನ್ನೆ ನಾ ಆಡಿದ ಮಾತನ್ನೆ ಎತ್ಕೊಂಡು ಒಂದು ಕತೆ ಬರ್ದಿದ್ದೀರಲ್ಲಾ?"

"ಆ ಕತೆಗೆ ಬಹುಮಾನ ಕೂಡಾ ಬಂದಿದೆ."

"ಚೆನ್ನಾಯ್ತು. ಆ ಕತೆ ನಂದು. ಹೆಸ್ರು ಮಾತ್ರ ನಿಮ್ಗೆ!"

"ಹೌದು ನಿನ್ನದೆ 'ಪ್ಲಾಟ್ ಕಟ್' ಅದು."

"ನನ್ಗೆ ಬಹುಮಾನ್ವೆಲ್ಲಿ?"

"ತಗೊ..............."

"ಕೈ ಬಿಡೀಂದ್ರೆ, ಥೂ ಒಂದಿಷ್ಟು ನಾಚ್ಕೆಯಾಗೋದಿಲ್ವೆ!"



# ನುಡಿಗೂ ನಡೆಗೂ ನಡುವೆ!

ಶ್ರೀ ಕೆ. ಹೊನ್ನಯ್ಯ ಶೆಟ್ಟಿ

★

ಇವರು 'ನವಯುಗ' 'ಅಂತರಂಗ' ವಾರಪತ್ರಿಕೆಗಳ ಮ್ಹಾಲಕರು. ನವಯುಗ ಎಂಟರ್‌ಪ್ರೈಸ್, ಲಿಮಿಟೆಡ್‌ನ ಮೆನೇಜಿಂಗ್ ಡೈರೆಕ್ಟರರು ಕನ್ನಡ ದೇಶ—ಭಾಷೆಗಳ ಮೇಲ್ಮೆಗಾಗಿ ದುಡಿದ-ದುಡಿಯುತ್ತಲಿರುವ ತರುಣರು. 'ಕಿರಿಯರ ಪ್ರಪಂಚ'ವೆಂಬ ಸಾಹಿತ್ಯ ಸಂಸ್ಥೆಯ ಮುಖಾಂತರ ಅನೇಕ ಪುಸ್ತಕಗಳನ್ನು ಪ್ರಕಟಿಸಿ ಕನ್ನಡ ನುಡಿವೆಣ್ಣಿಗೆ ಕಾಣಿಕೆಯಾಗಿ ಒಪ್ಪಿಸಿದ್ದಾರೆ. 'ಮಧುವನ' 'ಕಾವ್ಯ ಸಾಮ್ರಾಜ್ಯ'ಗಳೆಂಬ ಎರಡು ಗ್ರಂಥಗಳು ಇವರ ಸಾಹಸದ ಫಲಗಳೆ ಆಗಿವೆ. ಶಿಶುಸಾಹಿತ್ಯದಲ್ಲಿಯೂ ಶ್ರೀಯುತರು ಹೇಳಿಕೊಳ್ಳಬಹುದಾದ ಕೆಲಸ ಮಾಡಿದ್ದಾರೆ. 'ಮುಗುಳು' ಎಂಬ ಶಿಶುಸಾಹಿತ್ಯಿಕ ಪುಸ್ತಕವೆ ಇದಕ್ಕೆ ಸಾಕ್ಷಿ. ಕೆಲವು ಸಣ್ಣ ಕತೆ-ಕವಿತೆಗಳನ್ನೂ ಬರೆದಿದ್ದಾರೆ. ಇವರ '!!!' ಎಂಬ ಸಣ್ಣ ಕತೆ ತುಂಬ ಕಲಾಪೂರ್ಣವಾದ ಮಾದರಿ ಸಣ್ಣ ಕತೆಯೆನಬಹುದು 'ಸ್ವತಂತ್ರ ಜೀವನೋಪಾಯ'ವೆಂಬ ಸಣ್ಣ ನಾಟಕವನ್ನು ಬರೆದು ಪ್ರಕಟಿಸಿದ್ದಾರೆ ಶ್ರೀ ಶೆಟ್ಟರು ಜೀವನದ ವಿಮರ್ಶಕರು- ಎಂತಲೆ ಅವರ ಕತೆಗಳಲ್ಲಿ ಬಾಳಿನಲ್ಲಿ ತೂರಿಕೊಂಡಿರುವ ಕೊಳಕು ಮಾರ್ಮಿಕವಾಗಿ ಚಿತ್ರಿಸಲ್ಪಡುತ್ತದೆ.

ಅಂದೊಂದು ದಿನ ನಮ್ಮೂರ ತೇರುಬೀದಿಯಲ್ಲೊಂದು ಭಾಷಣ-ವಿಷಯ "ಮಠ ದೇವಾಲಯಗಳ ಸುಧಾರಣೆ."

ನಿಶ್ಚಿತ ವೇಳೆಗೆ ಸರಿಯಾಗಿ ಹಲವು ಜನರುಬಂದು, ತೇರುಬೀದಿಯಲ್ಲಿ ಸೇರಿದರು. ಶ್ರೀ ರಾಮರಾಯರ ಅಧ್ಯಕ್ಷತೆಯಲ್ಲಿ ಸಭಾರಂಭವಾಯಿತು.

ಮೊದಲು ಗೋಪಾಲರಾಯರ ಭಾಷಣವಾಯಿತು. ಎರಡನೆಯದಾಗಿ ಶಿವರಾಯರು ಮಾತನಾಡಿದರು. ಮೂರನೆಯದಾಗಿ 'ಸುಧಾರಕ' ಪತ್ರಿಕೆಯ ಸಂಪಾದಕರ ಭಾಷಣ. ಅವರು ಮಾತನಾಡುತ್ತ " ....ಇಂದು ಮಠ ದೇವಸ್ಥಾನಗಳು ಸೂರೆ ಸುಲಿಗೆಗಳ ತವರುಮನೆಗಳಾಗಿವೆ; ವ್ಯಾಪಾರೀ ಸಂಸ್ಥೆಗಳಾಗಿ ಮಾರ್ಪಟ್ಟಿವೆ. ಇಂಥ ಮಠ ದೇವಸ್ಥಾನಗಳು ಅಳಿಯ ಬೇಕು. ಅವುಗಳಿಂದ ಊರಿಗೆ ಕ್ಷೇಮವಿಲ್ಲ. ಅವುಗಳಲ್ಲಿಯ ಹೇರಳ ದ್ರವ್ಯವು ಅನಾವ್ರಯವಾಗುತ್ತಿರುವುದನ್ನು ನೋಡುವಾಗ ತುಸು ವಿಚಾರ ವಂತನಿಗೂ ಪಶ್ಚಾತ್ತಾಪವಾಗದಿರಲಾರದು. ಹಣವು ಹೇಗೆ ಹೇಗೆ ಅನಾವ್ರಯವಾಗುತ್ತದೆಂಬುದನ್ನಿಲ್ಲಿ ವಿವರಿಸುವ ಅಗತ್ಯವಿಲ್ಲ. ಪಾತ್ರಾ ಪಾತ್ರ ವಿವೇಚನೆಯಿಲ್ಲದೆ ಸಾವಿರಾರು ಜನರಿಗೆ ಅನ್ನದಾನ ನಡೆಯುತ್ತದೆ. ಮನೆಯಲ್ಲಿ ಚೆನ್ನಾಗಿ ಉಣಲಿಕ್ಕಿರುವವರಿಗೇ ಅಲ್ಲಿ ಊಟ! ಬಡವರು, ಭಿಕ್ಷುಕರು ಬಂದರೆ ಅವರನ್ನು ದಾನವರಂತೆ ಹೊಡೆದೋಡಿಸುತ್ತಾರೆ. ಮಠ ದಾಳುಗಳಿಗೆ ದಯೆ ದಾಕ್ಷಿಣ್ಯವೆಂಬುದಿಲ್ಲ. . . .ಇನ್ನು ಯಜ್ಞ ಹೋಮ ವೆಂದು ಹಾಳಾಗುವ ದ್ರವ್ಯವೆಷ್ಟು! ಇವಕ್ಕೆ ಎರೆಯುವ ತುಪ್ಪವನ್ನು ಬಡವರಿಗೆ ಕೊಡಬಾರದೇ? ಉತ್ಸವದ ವೇಳೆ ಹಾಳಾಗುವ ದುಡ್ಡು ಎಷ್ಟು! ಈ ಉತ್ಸವಗಳೇಕೆ? ಆಡಂಬರಗಳೇಕೆ? ಬಿರುಸುಬಾಣಗಳೇಕೆ? ವಾದ್ಯ

ಘೋಷವೇಕೆ? ಹೀಗೆ ಹಾಳು ಮಾಡುವ ಹಣವನ್ನು ಸದ್ವಿನಿಯೋಗಿಸುವಂತೆ ಮಾಡುವುದು ನಮ್ಮ ಕರ್ತವ್ಯವಾಗಿದೆ. ಇದಕ್ಕಾಗಿ ನಾವೆಲ್ಲರೂ ಹೋರಾಡಬೇಕು." ಎಂದು ಮುಂತಾಗಿ ಒಳ್ಳೇ ಆವೇಶದಿಂದ ಹೇಳಿದರು. ಸಭಿಕರೂ 'ಭ್ಯಾಷ್ ಭ್ಯಾಷ್' ಎಂದರು. ಕೈಚಪ್ಪಾಳೆಯೋ ಚಪ್ಪಾಳೆ! "ಭಾಷಣವೆಂದರೆ ಹೀಗಿರಬೇಕು" ಎಂದರು ಕೆಲವರು. ಅಂತೂ ಸಭಾ ಕಾರ್ಯವು ಅಧ್ಯಕ್ಷ ಭಾಷಣ, ಧನ್ಯವಾದಗಳೊಡನೆ ಯಶಸ್ವಿಯಾಗಿಯೇ ಸಮಾಪ್ತಿಯಾಯಿತು. ಎಲ್ಲರೂ ಹೊರಟು ಹೋದರು.

* * * *

ಇಂದು ಅದೇ ಊರ ಜಾತ್ರೆ. ಸಂಪಾದಕರು ತನ್ನ ನೆಂಟರಿಷ್ಟರು, ಬಂಧುಬಳಗದವರನ್ನೆಲ್ಲಾ ಎರಡೆರಡು ಕಾಗದ ಬರೆದು ಜಾತ್ರೆಗೆ ಕರೆಸಿಕೊಂಡಿದ್ದಾರೆ. ಖರ್ಚಿಗೆ ತೊಂದರೆಯಾಗಬಾರದೆಂದು ಮೊದಲೇ ಇಂಡಿಯನ್ ಬ್ಯಾಂಕಿನಿಂದ ರೂ. ೨೦೦/-ಸಾಲಪಡೆದುದಾಗಿದೆ. ಬಂದಿರುವ ನೆಂಟರಿಷ್ಟರೊಡನೆ ವಿಲಾಸದಿಂದಿರುವುದಕ್ಕೆ ತಡೆಯುಂಟಾಗದಂತೆ ಸಂಪಾದಕರೂ ಒಂದು ತಿಂಗಳ ರಜೆಯನ್ನು ಪಡೆದು ಮನೆಯಲ್ಲೇ ಇದ್ದಾರೆ.

ಅತಿಥಿಯಭ್ಯಾಗತರಿಗೆ ಸಂಪಾದಕರ ಮನೆಯಲ್ಲಾಗುತ್ತಿದ್ದ ಸತ್ಕಾರ ಸಮಾರಂಭವನ್ನು ವಿವರಿಸುವುದೇ ಬೇಡ. ಊಟ-ಉಪಚಾರದ ಸಂಭ್ರಮವೇನು? ಭಕ್ಷ್ಯ ಭೋಜ್ಯಗಳ ವೈಭವವೇನು! ಬೆಳಿಗ್ಗೆ ಎದ್ದೊಡನೆ ಕಾಫಿ ಟಿಫಿನ್, ಟಿಫಿನಿಗೆ ನಾಲ್ಕಾರು ಬಗೆಯ ತಿಂಡಿತಿನಸುಗಳು! ಮಧ್ಯಾಹ್ನ ಪಂಚಭಕ್ಷ ಪರಮಾನ್ನ! ಪುನಃ ಸಂಜೆ ೪ ಘಂಟೆಗೆ ಕಾಫಿಟಿಫಿನ್ ರೆಡಿ! ಅನಂತರ ಮೋಟಾರು ಕಾರುಮಾಡಿ ದಿನಕ್ಕೊಂದು ಕಡೆಗೆಂಬಂತೆ ವಿಹಾರ! ರಾತ್ರಿ ಪುನಃ ಗಮ್ಮತಿನ ಊಟ. ಇದನ್ನೆಲ್ಲಾ ವಿವರಿಸಿದರೆ ಅದೇ ಒಂದು ಪುರಾಣವಾದೀತು. ಮತ್ತೆ ರಾತ್ರಿ ಸಿನೆಮವಾದರೆ ಸಿನೆಮ, ನಾಟಕವಾದರೆ ನಾಟಕ, ಸರ್ಕಸಾದರೆ ಸರ್ಕಸ್!

ಒಂದು ದಿನ ಮಧ್ಯಾಹ್ನದ ಊಟ ಆಗಿ ಸಂಪಾದಕರು ನೆಂಟರೊಂದಿಗೆ ಮಾತನಾಡುತ್ತಿದ್ದಾರೆ. ಆಗ "ಅಮ್ಮಾ, ಧರ್ಮಾ" ಎಂದು ಬಡಕಲು

ಭಿಕ್ಷುಕನೊಬ್ಬ ಬಂದು ಬಿಟ್ಟ. ಯಾರೂ ಮಾತನಾಡಲಿಲ್ಲ. ಅವನು ಪುನಃ "ಅಮ್ಮಾ, ಧರ್ಮ ಕೊಡೀ" ಎಂದ. ಯಾರೂ ಉತ್ತರ ಕೊಡಲಿಲ್ಲ. "ಅಮ್ಮಾ, ಧರ್ಮಾ!" ಎಂದು ಆತ ಪುನಃ ಗಟ್ಟಿಯಾಗಿ ಅರಚಿದ.

ಸಂಪಾದಕರು ಸಿಟ್ಟಾಗಿ ತಟ್ಟನೆದ್ದು "ಇಲ್ಲಿ ಧರ್ಮಗಿರ್ಮ ಇಲ್ಲ, ಹೋಗಾಚೆ" ಎಂದರು.

"ಸ್ವಾಮೀ, ಬೆಳಿಗ್ಗಿನಿಂದ ಊಟ ಇಲ್ಲಾ, ಒಂದಿಷ್ಟು ಅನ್ನಕೊಡೀ, ಪುಣ್ಯ ಬರುತ್ತೆ ಸ್ವಾಮೀ" ಎಂದು ಅಂಗಲಾಚಿದ ಭಿಕ್ಷುಕ.

"ನಿನ್ನ ಪುಣ್ಯಗಿಣ್ಯ ನಮಗೆ ಬೇಡ. ಕೊಡುವುದಿಲ್ಲವೆಂದ ಮೇಲೆ ನಾವು ಕೊಡುವುದೇ ಇಲ್ಲ. ಒಳ್ಳೇ ಮಾತಿನಿಂದ ಇಲ್ಲಿಂದ ತೊಲಗು" ಎಂದರು ಸಂಪಾದಕರು.

"ಅಯ್ಯಾ, ಹಸಿವಾಗುತ್ತೆ ಸ್ವಾಮೀ! ಏನಾದರೂ ಒಂದಿಷ್ಟು ಧರ್ಮ ಕೊಡಿ ಸ್ವಾಮೀ" ಎಂದ ಪುನಃ ಭಿಕ್ಷುಕ.

"ಇಷ್ಟು ಹಟ ನಿನಗೆ! ಹೋಗೆಂದರೆ ಹೋಗಬೇಕು. ನಡಿ ಬದ್ಮಾಷ್!" ಎಂದು ಸಂಪಾದಕರು ಬೆತ್ತ ತೆಗೆದರು, ಒಂದು ಹೆಜ್ಜೆ ಮುಂದಾದರು.

ಭಿಕ್ಷುಕ ಕುಂಟುತ್ತ, ಏನೋ ಗೊಣಗುಟ್ಟುತ್ತ ಅಲ್ಲಿಂದ ಹೊರಟ.



# 'ಅವರು ನನ್ನ ದೇವರು'

**ಶ್ರೀ ಬನ್ನಂಜೆ ರಾಮಾಚಾರ್ಯರು**

*

ಇವರು ಧುರೀಣ ಮಾಸಪತ್ರಿಕೆಯ ಸಂಪಾದಕರು. ಕೆಲವು ಕಾಲ ''ನವಶಕ್ತಿ''ಯೆಂಬ ಮೋಲ್ತರಗತಿಯ ಮಾಸಪತ್ರಿಕೆಯನ್ನು ನಡೆಯಿಸಿಕೊಂಡು ಬಂದಿದ್ದರು. ಇವರು ಇದುವರೆಗೆ ಅನೇಕ ಕತೆ– ಲೇಖನಗಳನ್ನು ಬರೆದಿದ್ದಾರೆ. ಇವರ ಒಂದು ಲೇಖನವನ್ನು ಪ್ರಕಟಿಸುತ್ತ ನವಯುಗ ಮಕರ ಸಂಕ್ರಾಂತಿ ಸಂಚಿಕೆಯಲ್ಲಿ ಅದರ ಸಂಪಾದಕರು ''ವಿಷಯ ಸ್ವಾರಸ್ಯ— ಶೈಲಿಯ ಮಾಧುರ್ಯ— ವಿಮರ್ಶಕ ಬುದ್ಧಿ— ಇವಿಷ್ಟನ್ನೂ ಇವರ ಬರೆಹಗಳಲ್ಲಿ ಕಾಣಬಹುದು. ಸಮರ್ಥ ಲೇಖನಿಯಿವರದು" ಎಂದು ಅಭಿಪ್ರಾಯಪಟ್ಟಿದ್ದಾರೆ. ಇವರ ಲೇಖನಗಳು ಅಂತರಂಗ—ನವಯುಗ – ರಾಷ್ಟ್ರಬಂಧು—ಜಯಂತಿ—ಜಯ ಕರ್ನಾಟಕ— ಮುಂತಾದ ಪತ್ರಿಕೆಗಳಲ್ಲಿ ಅಚ್ಚಾಗುತ್ತಲಿದ್ದುವು. ಇದು ವರೆಗೆ ಯಾವುದೂ ಸಂಗ್ರಹವಾಗಿ ಪ್ರಕಟವಾಗಿಲ್ಲ ಸಂಸ್ಕೃತ— ಹಿಂದೀ ಮುಂತಾದ ಇತರ ಸಾಹಿತ್ಯಗಳ ಪರಿಚಯವೂ ಸಾಕಷ್ಟಿದೆ ಇವರ ಭಾವನೆಗಳೆಲ್ಲ ತೀವ್ರಗಾಮಿಯಾದುವು. ಸಾಹಿತ್ಯದ ಎಲ್ಲ ಶಾಖೆಗಳಲ್ಲಿಯೂ ಇವರ ಕೈಯೋಡಬಲ್ಲುದಾದರೂ ಕತೆಗಾರಿಕೆಯಲ್ಲಿಯೆ ಸಾಫಲ್ಯ ಸಿದ್ಧಿ. ಉತ್ತಮವಾದ ರಾಜಕೀಯ ಲೇಖನಗಳನ್ನು ಕೂಡ ಬರೆಯಬಲ್ಲರು. ಇವರ ಶೈಲಿ ಸೊಗಸಾದುದು ಅದರಲ್ಲಿ ಕಾಂತಿ–ಓಜಸ್ಸು–ಪ್ರಸಾದ ಗುಣಗಳು ಸಾಂದರ್ಭಿಕವಾಗಿ ಒಡೆದುತೋರುತ್ತವೆ. ಇವರ ಕೆಲವು ಕತೆಗಳಲ್ಲಿ ಅಶ್ಲೀಲತೆ ಇದೆಯೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಸುಬ್ಬಿಯ ಕೇಳಿಕೆ— ಹೆಂಗುಸಿನ ಬದುಕು — ಬೆಳ್ಳಿಬೆಟ್ಟದ ಒಪ್ಪಂದ— ಮುಂತಾದ ಕೆಲವು ಕತೆಗಳು ಇವರ ಕಲಾಕೋವಿದತನಕ್ಕೆ ಒಳ್ಳೆಯ ದೃಷ್ಟಾಂತಗಳಾಗಿವೆ.

ಕೊಡವೂರು ಕಾನ್ತಯ್ಯನೆಂದರೆ ಆ ಊರಿಗೆಲ್ಲ ಹೆಸರಾದ ಜನ. ಅವನ ಹಿರಿಯರಿಗೆ ಬೇಕಷ್ಟು ಆಸ್ತಿಯಿದ್ದಿತಂತೆ. ಆದರೆ ಕಾನ್ತಯ್ಯ ಸಿಂಹಾಸನಾರೂಢನಾದ ಬಳಿಕ ಒಂದೊಂದೆ ಆಸ್ತಿಯ ತುಂಡುಗಳು ಅವನ ಕೈಯಿಂದ ಜಾರತೊಡಗಿದುವು. ಅವನು ದುಂದುವೆಚ್ಚದ ಆಸಾಮಿಯೆನ್ನಲಾಗದಿದ್ದರೂ ಬೇಡಾಗದ ಕಾರುಭಾರುಗಳಲ್ಲಿ ತಲೆಹಾಕಿ ಒದ್ದಾಡುವ ಚಟದ ಮನುಷ್ಯನಾಗಿದ್ದ. ಈಯೊಂದು ಚಟದಿಂದಾಗಿಯೆ ಅವನ ಕೈ ಬರಿದಾಗಹತ್ತಿತು. ಊರಿನ ಜನಕ್ಕೆಲ್ಲ ಕಾನೂನು ಕಾಯಿದೆಗಳ ಮಾರ್ಗದರ್ಶಕನೆಂದರೆಯೆ ಕಾನ್ತಯ್ಯ. ಕಾನ್ತಯ್ಯ ಇಲ್ಲದೆ ಯಾವ ಕಾರ್ಯವೂ ಇಲ್ಲ. ಕಾನ್ತಯ್ಯ ಇಷ್ಟು ಖ್ಯಾತನಾಮನಾಗಿದ್ದರೂ ದಿನಗಳೆದಂತೆ ಅವನ ಜೀವನ ಹೊಸ ಹೊಸ ತಾಪತ್ರಯಗಳ ರಂಗಭೂಮಿಯಾಗತೊಡಗಿತು. ದುಡ್ಡಿನ ದುರ್ದಿನಗಳು ಅವನನ್ನು ಕಂಗಾಲ ಪರಿಸ್ಥಿತಿಯಲ್ಲಿ ತಂದು ನಿಲ್ಲಿಸಿದುವು. ಕೈ ಬರಿದಾಗಿದೆ— ಖರ್ಚಿನಲ್ಲಿ ಸ್ವಲ್ಪ ಮಿತಿಯನ್ನು ಮಾಡೋಣವೆಂದರೆ— ಅವನ ಸ್ವಭಾವ ಅದಕ್ಕೆ ವಿರುದ್ಧವಾದುದು. ಆದರೆ ರೀವಿ ನಡೆಯುವ ಬಗೆ ಹೇಗೆ? ಅವನ ಮಗಳು— ಒಬ್ಬಳೆ ಸುಕುಮಾರಿ— ಶಾನ್ತಾಳ ಮದುವೆ ಮುಗಿದ ಬಳಿಕಂತೂ ಕಾನ್ತಯ್ಯನ ಅವಸ್ಥೆ ತೀರ ಕೆಡಹತ್ತಿತು. ಕೊಡವೂರಿನ ಜನ ಆಪತ್ತಿಗೆ ಸಿಲುಕಿದಾಗ— ದಾರಿ ಕಾಣದ ಸಮಸ್ಯೆಯಲ್ಲಿ ತೊಡರಿಕೊಂಡಾಗ— ಅವರ ಮಾರ್ಗದರ್ಶಕನಾದ ಕಾನ್ತಯ್ಯನ ಈ ಪದವಿ ಈಗಲೂ ಹಾಗೆಯೆ ಇದೆ. ಆದರೆ ಕಾನ್ತಯ್ಯ ಈಗ ಮೊದಲಿನಂತೆ ನಿರ್ಭರ ಮನುಷ್ಯನಲ್ಲ. ಸಾಲಗಾರನಾಗಿದಾನೆ. ಸಾಲ ಸಂದಾಯ ಮಾಡುವುದಕ್ಕೆ ದಾರಿಯಿದ್ದಿಲ್ಲ. ಹೊಸ ಸಾಲ ಹುಟ್ಟು

ವಂತಿಲ್ಲ. "ದುಡ್ಡು ಕೊಟ್ಟರೆ ಬೇಗ ಸಿಗುವುದಿಲ್ಲ"ವೆಂದು ಅವನ ಕುರಿತು ಊರ ತುಂಬೆಲ್ಲ ಹರಡಿದ್ದಿತು. ಕಾನ್ತಯ್ಯ ಸ್ವಾಭಿಮಾನಿ. ಎಂತಹ ಆಪತ್ತಿನಲ್ಲಿಯೂ ಒಬ್ಬರಿಗೂ "ದೇಹಿ" ಎಂದು ಅವನಿಗೆ ಗೊತ್ತಿರಲಿಲ್ಲ. ಹೊಸತಾಗಿ ಉಂಟಾದ ಈ ವಿಷಮಸನ್ನಿವೇಶದಲ್ಲಿ ಅವನು ಮುಂಗಾಣ ದಾದ. ಕೊನೆಗೆ ಶಾನ್ತಾಳ ಪತಿ— ಅಳಿಯ ಐತಪ್ಪನನ್ನು "ದೇಹಿ" ಎನ್ನು ವುದು ಎಂದು ತೀರ್ಮಾನಿಸಬೇಕಾಯಿತು. ಐತಪ್ಪ ಕೊಡಂಕೂರಿನ ಸೂರಣ್ಣನ ಮಗ. ಸ್ವಲ್ಪ ಹಣವಂತನೆಂದೆ ಕಾನ್ತಯ್ಯ ಮಗಳನ್ನು ಕೊಟ್ಟುದು. ಗುಣದಲ್ಲಿಯೂ ಐತಪ್ಪ ಒಳ್ಳೆಯ ಹುಡುಗ. ವಿದ್ಯಾವಂತ ನಲ್ಲದಿದ್ದರೂ ಲೋಕರೂಢಿಗಳನ್ನರಿತವ. ವಿನಯ— ಸೌಜನ್ಯ—ಗಳುಳ್ಳವ. ಸೂರಣ್ಣನ ಅನಂತರ ಮನೆಯನ್ನು ವ್ಯವಸ್ಥೆಯಿಂದ ನೋಡಿಕೊಳ್ಳುತ್ತಿದಾನೆ. ಮುದಿತಾಯಿ, ತೀರಿಕೊಂಡ ಅಕ್ಕನ ನಿರ್ಗತಿಕ ಕೂಸೊಂದು, ಇಷ್ಟೆ ಅವನ ಸಂಸಾರ. ಅವನ ಕೂಡೆ ಕೇಳಿದರೆ ಹಣ ಸಿಗದೆ ಇರಲಾರದು ಎಂದು ಕಾನ್ತಯ್ಯನ ಕಾಯಾಸ. ಸರಿ; ಒಂದು ಶುಭ ಮುಹೂರ್ತದಲ್ಲಿ ಕೇಳಿಯೂ ಕೇಳಿದ. ಐತಪ್ಪ ಮಾವನ ಕೀರ್ತಿಯನ್ನೆಲ್ಲ ಕೇಳಿ ತಿಳಿದಿದ್ದ. "ಹಣಕೊಟ್ಟರೆ ಕೈಲಾಸವೆ ಗತಿ" ಎಂದು ಭಾವಿಸಿ "ದುಡ್ಡಿಲ್ಲ, ಮಾವ" ಎಂದು ಉತ್ತರಿಸಿಬಿಟ್ಟ. ಕಾನ್ತಯ್ಯ ಹಲವು ಬಗೆಯಿಂದ ಸಮಜಾಯಿಸಿ ನೋಡಿದ— ಎಲ್ಲ ರಾಗಕ್ಕೂ ಒಂದೇ ತಾಳ!

ಕಾನ್ತಯ್ಯ ಸ್ವಯಂ ಸ್ವಾಭಿಮಾನಿ. ಕುಗ್ಗಿಕೊಂಡು "ದೇಹಿ" ಎಂದೆನ್ನುವ ಪ್ರಸಂಗ ಅವನ ಜೀವನದಲ್ಲಿ ಇದೆ ಮೊದಲ ಬಾರಿ. ಮೊದಲು "ಐನೂರು ರೂಪಾಯಿ ಕೊಡಿ"ಎಂದು ಅವನ ಬಾಯಿಯಿಂದ ಬಿದ್ದರೆ ಸರಿ— ರುಪಾಯಿಯ ರಾಶಿಯೆ ಎದುರು ಬೀಳುತಲಿದ್ದಿತು. ಇಂದೋ— "ಐದು ರೂಪಾಯಿಯಿದ್ದರೆ ಕೊಡಿ" ಎಂದರೆ "ಭಾಳ ವ್ಯಸನವಾಗುತ್ತದೆ ಕಾನ್ತಯ್ಯ— ಏನೂ ಇಲ್ಲ" ಎಂಬ ಉತ್ತರವೆ ಗತಿ. ಇಂತಹ ಉತ್ತರ ಕೇಳಿ ಕೇಳಿ ಕಾನ್ತಯ್ಯ ಕುಗ್ಗಿ ಹೋಗಿದ್ದ. ಅಳಿಯನಿಂದ ಇಂತಹ ಉತ್ತರ ಬಂದೀತು ಎಂದು ಅವನು ನಿರೀಕ್ಷಿಸಿಯೆ ಇರಲಿಲ್ಲ. ಅಳಿಯನ ಮಾತು

ಅವನನ್ನು ಕೆರಳಿಸಿಬಿಟ್ಟಿತು. ತನ್ನ ವ್ಯಕ್ತಿತ್ವಕ್ಕೆಯೆ ಬಹಳ ಅವಮಾನ ವಾಯಿತು ಎಂದು ಭಾವಿಸಿದ. ಸಿಟ್ಟಿನಿಂದಲೆ ನಾಲ್ಕು ಮಾತುಗಳನ್ನಾಡಿಯೂ ನೋಡಿದ. ಐತಪ್ಪ ಅದಕ್ಕೂ ಬೆದರಲಿಲ್ಲ. ಸಾಲದ ತಾಪತ್ರಯದಿಂದಾಗಿ ದುಃಖವೂ— ಅಳಿಯನ "ಅಪರಾಧ"ದಿಂದಾಗಿ ಸಿಟ್ಟೂ— ಏಕಕಾಲದಲ್ಲಿ ಉಂಟಾದುವು. ಈ ಭಾವಶಬಲತೆಯಿಂದ ಕಂಗೆಟ್ಟು ಕಾನ್ತಯ್ಯ ಮನೆ ಸೇರಿದ.

*    *    *    *

ಕಾನ್ತಯ್ಯ ರೊಟ್ಟಿಯ ಮುಂದೆ ಆಲೋಚನೆಮಾಡುತ್ತ ಕುಳಿತಿದಾನೆ. ರೊಟ್ಟಿಯ ಮೇಲೆ ಹೊಯ್ದಿದ್ದ ಈರುಳ್ಳಿ ಚಟ್ನಿಯ ವಾಸನೆ ಕೋಣೆ ತುಂಬ ಹರಡಿತ್ತು. ಮುಂದುಗಡೆಯಿರುವ ಕಾಫಿಯ ಲೋಟಾದಿಂದ ಹೊಗೆಯೇಳು ತ್ತಿದೆ. ಎದುರು ಬದುರಾಗಿಯೇ— ತುದಿಗಾಲಿನಲ್ಲಿ ಸೇಸಿ— ಕಾನ್ತಯ್ಯನ ಧರ್ಮಪತ್ನಿ ಕುಳಿತಿದಾಳೆ. ಕಾನ್ತಯ್ಯ ತಲೆಗೆ ಸುತ್ತಿದ್ದ ರುಮಾಲನ್ನು ತೆಗೆದಿಟ್ಟು ಅಂಗಿಯ ಕೈಗಳನ್ನೆಲ್ಲ ಮೇಲಕ್ಕೇರಿಸಿಕೊಂಡು ಮೆಲ್ಲನೆ ಒಂದು ತುಂಡು ರೊಟ್ಟಿಯನ್ನು ಬಾಯಿಯೊಳಗಿರಿಸಿದ. ಪುನಃ ತುಸು ಕಾಲ ಆಲೋಚನೆಮಾಡಿ ಲೋಟಾವನ್ನೆತ್ತಿ ಒಂದು ಗುಟುಕು ಕಾಫಿ ಕುಡಿದು ಸೇಸಿಯ ಕಡೆಗೊಮ್ಮೆ ನೋಡಿದ.

ಸೇಸಿ ಕಿರಿದಾಗಿ ನಕ್ಕಳು. ಆ ನಗುವಿನಲ್ಲಿ ತೃಪ್ತಿಯಿತ್ತು. ಗಂಡನ ಕಡೆಗೆ ಸಹಾನುಭೂತಿಯಿತ್ತು. ತುಂಬಿದ ಅನುರಾಗವಿತ್ತು. ಸೇಸಿಯ ನಗುವಿನಿಂದಲೆ ಕಾನ್ತಯ್ಯನ ಹೊಟ್ಟೆತುಂಬಿತು. ಆ ಕೊಳಕಾದ ಹಲ್ಲುಗಳ ನಡುವಿನಿಂದ ಹೊರಬಂದ ಆ ನಗುವಿನ ಲಹರಿಯೆ ಕಾನ್ತಯ್ಯನನ್ನು ಕ್ಷಣ ಕಾಲ ಸುಖಿಯನ್ನಾಗಿ ಮಾಡಿತು!

ರೊಟ್ಟಿಯನ್ನಷ್ಟು ಕವಳಿಸಿ ಕಾಫಿಯನ್ನೆಲ್ಲ ಕುಡಿದು ಕರವಸ್ತ್ರದಿಂದ ಕೈಯನ್ನು ತಿಕ್ಕಿಕೊಳ್ಳುತ್ತ ಕಾನ್ತಯ್ಯ ಹೇಳಿದ:— "ಸೇಸಿ! ಐತ ಬಹಳ ಕೆಟ್ಟ ಮನುಷ್ಯ ಕಣೆ. ನನ್ನ ಮಗು ಶಾನ್ತಾನ್ನ—ಅನ್ಯಾಯವಾಗಿ ಅವನಿಗೆ ಕೊಟ್ಟೆ. ಅಲ್ಲ; ಮಾನ ಹೋಗೋ ಆಪತ್ತು ಬಂದಿದೆ. ಒಂದ್ನೈನೂರು

ರೂಪಾಯಿ ಕೊಟ್ಟುಬಿಡಪ್ಪ— ಎಂದರೆ ತಲೆತುಂಬ ಮಾತಾಡ್ತಾನೆ. ನಾನೇನು ಹಣತಿಂದು ಹಾಕೊಪ್ನೆ! ಒಂದುವೇಳೆ ತಿಂದ್ರೂನೂ ಮಾವ ತಾನೆ! ಬಂಗಾರದ್ಹಾಂಗಿನ ಹೆಣ್ಣನ್ನು ಕೊಟ್ಟಿಲ್ವೆ? ಅಥವಾ ಕೈಯಲ್ಲಿ ಕಾಸಿಲ್ಲಾಂತಂದ್ರೆ—ಹೂಂ-ಸಾಯಲಿ. ಹಣವಿಟ್ಟುಕೊಂಡು—ನಾನು—ಹೆಣ್ಣು ಕೊಟ್ಟಮಾವ— ಆಪತ್ತಿಗೆಂತ ಸಹಾಯಕೇಳಿದಾಗ ಕೊಡದಿದ್ದವ—ಇವ ಎಂಥಾ ಮನುಷ್ಯ!" "ಶಾನ್ತಾಳ ಕಡೆಯಿಂದ ಹೇಳಿಸಿ ನೋಡ್ರಿ. .. ...ಎಂದರೆ ಏನಾದರೂ . . .." ಸೇಸಿ ವೀಳೆಯವನ್ನು ಜಗಿಯುತ್ತ ಹೇಳುತ್ತಿರುವಾಗಲೆ ನಡುವೆ ಕಾನ್ತಯ್ಯ ಕೂಗಿಹೇಳಿದ:— "ಹೌದೇ! ನಿನಗೆ ಸ್ವಲ್ಪವೂ ಬುದ್ಧಿಯಿಲ್ಲ. ಈ ಕಾನ್ತಯ್ಯ ಒಂದ್ನೈನೂರು ರೂಪಾಯಿಗಾಗಿ ಮಗಳ ಕಾಲು ಹಿಡಿಯಬೇಕೇ? ಹಣ— ಹಣ— ಎಲ್ಲಿಯೂ ಬರುತ್ತೆ— ಎಲ್ಲಿಯೂ ಹೋಗುತ್ತೆ. ಮನುಷ್ಯನಿಗಿರೋದು ಮಾನ. ಮಾನ ಬಿಡೋದಕ್ಕಿಂತ ಸಾಯೋದು ಸುಖ ಸೇಸಿ. ಆ ಘಟಿಂಗನ ಕಾಲುಹಿಡಿದು ಮಂಗಳಾರತಿ ಆಯಿತು. ಇನ್ನು ಮಗಳ್ನ "ದಮ್ಮಯ್ಯ" ಎಂದರೆ ಉದ್ಧಾರ ಮಾಡುತ್ತಾಳೆಯಲ್ಲವೆ? ನಿನಗೆ ಹುಚ್ಚು. ಕಾನ್ತಯ್ಯ ಇನ್ನು ಒಬ್ಬನ ಹತ್ತಿರವೂ ಬೇಡಲಿಕ್ಕೆ ಹೋಗಲಾರ. ಹಣೆಯಲ್ಲಿ ಬರೆದಂತೆ ಆಗುತ್ತೆ. ದೇವರು ಕೊಟ್ಟಂತೆ ಆಗುತ್ತೆ. ಒಂದುವೇಳೆ ದಾರಿಯೇ ಇಲ್ಲವೆಂದಾದರೆ ಹೊಳೆಯೋ ಬಾವಿಯೋ ಇದ್ದೆ ಇದೆ......... .!"

ಸೇಸಿ ಕಣ್ಣು ಅರಳಿಸಿ—ಕೆರಳಿಸಿ—ಈ ಮಾತುಗಳನ್ನು ಕೇಳಿದಳು. ಕಾನ್ತಯ್ಯ ತಾನೂ ತಾಂಬೂಲದ ತಾಟಿನಿಂದ ಎರಡೆಲೆ ತೆಗೆದು ಬಾಯಿಯೊಳಗೆ ತುರುಕಿಸಿ ಇನ್ನೂ ಕೊಂಚ ಆವೇಶದಿಂದಲೆ ನುಡಿದನು:— "ಐತಪ್ಪ ಮಣ್ಣುತಿನ್ನಲಿ. ಏನೋ ಎರಡು ಕುರುಡು ಕಾಂಚಾಣ ಕೈಯಲ್ಲುಂಟು ಎಂತ ಮಗಳ್ನ ಕೊಟ್ಟೆ. ಇನ್ನೊಬ್ಬರ ಸುಖ ದುಃಖ ಇಲ್ಲದ ಅವ ಎಂಥಾ ಪ್ರಾಣಿ!........ ಆದರೆ ಸೇಸಿ—ಈ ಕಾನ್ತಯ್ಯ ಸಾಧಾರಣಾಂತ ತಿಳೀಬೇಡ. ಮನಸ್ಸು ಮಾಡಿದರೆ ಏನೂ ಮಾಡಬಲ್ಲವ. ಕೊನೆಯ ಬಾರಿಯೊಮ್ಮೆ ಕೇಳಿ ನೋಡುತ್ತೇನೆ. ಒಪ್ಪಿದರೆ ನೆಟ್ಟಗಾಯಿತು. ಇಲ್ಲಾ—

ನಾಯಿಬಾಲ ಡೊಂಕೆ ಸರಿ–ಎಂದಾದರೆ ಮಗಳ್ನ ಕರ್ಕೊಂಡ್ಬರ್ತೇನೆ. ಮಗು ಮನೆಯಲ್ಲಿಯೆ ಇರಲಿ. ನಾನು ಜೀವದಲ್ಲಿರುವ ತನಕ ಉಪವಾಸ ಹಾಕ ಲಾರೆ. ಮುಂದೆ ದೇವರ ಚಿತ್ತ...........!"

ಕಾನ್ತಯ್ಯನ ನಿರ್ಧಾರ ಕೇಳಿಯೆ ಸೇಸಿ ಬೆಚ್ಚಿಬಿದ್ದಳು. "ಎಷ್ಟಾದರೂ ನಾವು ಹೆಣ್ಣುಕೊಟ್ಟವರು. ಸ್ವಲ್ಪ ಜಾಗ್ರತೆಯಿಂದಲೆ ಇರಬೇಕಲ್ಲವೆ?"

ಎಂದು ಸೇಸಿ ಏನನ್ನೊ ಹೇಳುವದರಲ್ಲಿದ್ದಳು. ಅವಳ ಮಾತನ್ನು ಮುಂದೆ ಸಾಗಗೊಡದೆಯೆ ಕಾನ್ತಯ್ಯ ಗರ್ಜಿಸಿದ:— "ಲೇ ಸುಮ್ಮಗಿರೆ! ಹೆಂಗಸರಿಗೇನು ಗೊತ್ತಿದೆ. ಅಡುಗೆಮನೆಯ ಪಶುಗಳಿಗೆಷ್ಟೊ ಬಾಯಿ! ನನಗೆ ಬುದ್ಧಿ ಹೇಳ್ಳಿಕ್ಕೆ ಬರ್ತಾಳೆ! ಐತಪ್ಪನ ಅಹಂಕಾರ ಹೆಚ್ಚಾಯಿತು. ಈಗಿನ ಕಾಲದ ಹುಡುಗರೆ ಹೀಗೆ. ದೊಡ್ಡವರ ಮೇಲೆ ವಿಧೇಯತೆಯಿಲ್ಲ. ಉಪಕಾರದ ಮಾತು ಕೇಳಲೆ ಬೇಡ. ಇಂಥಾ ತುಂಟರಿಗೆ ಬುದ್ಧಿಗಲಿಸದೆ ಹೋದರೆ ಲೋಕ ಹಾಳಾದೀತು!"

ಸೇಸಿಗೆ ಮುಂದೆ ಹೇಗೆ ಮಾತನಾಡಬೇಕೆಂಬುದೆ ಗೊತ್ತಾಗಲಿಲ್ಲ. "ನೀರುಕಾಯಿಸಿಡಲೇ? ಸಂಜೆಗೆ ಸ್ನಾನಮಾಡುತ್ತೀರಾ" ಎಂದು ಮಾತಿನ ದಿಕ್ಕನ್ನೆ ತಪ್ಪಿಸುವ ಯತ್ನ ಮಾಡಿದಳು. "ಸ್ನಾನ! ಸ್ನಾನ! ಮಾನಹೋಗುವ ಕಾಲದಲ್ಲಿ ಸ್ನಾನದ ಯೋಚನೆ!" ಎಂದು ನಗುತ್ತ ಕಾನ್ತಯ್ಯ ಎದ್ದುಬಿಟ್ಟ.

* * * *

ಐತಪ್ಪನ ಮನೆ ಒಂದು ಚಿಕ್ಕ ತೋಪಿನ ಮರೆಯಲ್ಲಿ. ಮನೆಯ ಒಂದು ಪಾರ್ಶ್ವದಲ್ಲಿಯೆ ಕಿರುದೊರೆಯೊಂದು ಹರಿಯುತಲಿತ್ತು. ವಾಯುವ್ಯ ದಲ್ಲಿ ಸ್ವಲ್ಪ ಎತ್ತರವಾದ ಒಂದು ಬೆಟ್ಟ. ಮುಂಭಾಗದಲ್ಲಿ ವಿಶಾಲವಾದ ಬಯಲು. ಹಿಂಭಾಗದಲ್ಲಿ ವಿಶಾಲವಾದ ಮಳಲಿನ ಮೈದಾನ. ಇಂತಹ ಒಂದು ಚೆಲುವಿನ ತೌರೂರೆನಿಸುವ ಜಾಗೆಯಲ್ಲಿ ಐತಪ್ಪನ ಮನೆ.

ಆ ಹೊತ್ತು ಸಂಜೆ. ಶರತ್ಕಾಲದ ಹಗಲಾದುದರಿಂದ ಬಿಳಿ ಮೋಡ ಗಳಿಂದ ಬಾಂದಳ ಬಾಸಣಿಸಿತ್ತು. ಬೈಗಿನ ಹೊಸಬಗೆಯ ಚಲುವೊಂದು

ವಿಶ್ವದಲ್ಲಿಯೆ ನೆಲೆಯೂರಿತ್ತು. ಐತಪ್ಪ ತೋಟದಲ್ಲಿ ತಿರುಗುತ್ತಿದ್ದವನು ತೋಡಿನ ಸನಿಯಕ್ಕೆ ಬಂದ. ತಿಳಿಯಾದ ನೀರು ಮಾಟಗಾತಿಯ ನಡೆಯಂತೆ ಹರಿಯುತಿತ್ತು. ಹಿರಿ—ಕಿರಿ—ಮೀನುಗಳು ನೀರಾಟವಾಡುತಲಿದ್ದುವು. ತೆಳುಗಾಳಿ ಮಿದುವಾಗಿ ಬೀಸಿ ನೀರಿನಲ್ಲಿ ಕಿರುದೆರೆಗಳನ್ನೆಬ್ಬಿಸುತಲಿತ್ತು. ಕಡಲ ಕಡೆಗೆ ಸರಿದಿದ್ದ ಬೆಂಗದಿರನು ಐತಪ್ಪನನ್ನು ಇಣಿಕಿಯಿಣಿಕಿ ನೋಡುತಲಿದ್ದ. ಐತಪ್ಪನಿಗೆ ಈ ಜಾಗೆಯೇಕೋ ಮನಸ್ಸಿಗೆ ಬಹಳವಾಗಿ ಹಿಡಿಯಿತು. ಅಲ್ಲಿಯೆ— ಪಕ್ಕದಲ್ಲಿದ್ದ ಬಂಡೆಯೊಂದರ ಮೇಲೆ ಹೋಗಿ ಕುಳಿತ.

ವಾಯುವ್ಯ ಪಾರ್ಶ್ವದಲ್ಲಿರುವ ಗುಡ್ಡದ ಕಡೆಗೊಮ್ಮೆ ನೋಡಿದಾಗ ಐತಪ್ಪನಿಗೆ ಆಶ್ಚರ್ಯವಾಯಿತು. ಸೂರ್ಯಕಿರಣಗಳ ಹೊಂಬಣ್ಣದಿಂದ ಕಳೆಯೇರಿದ ಹೆಂಗುಸೊಬ್ಬಳು ಕೈಯಲ್ಲೊಂದು ಹಗ್ಗವನ್ನು ಹಿಡಿದುಕೊಂಡು ಆಚೆ— ಈಚೆ— ಏನನ್ನೊ ಅರಸುತಲಿದ್ದಾಳೆ. ಆಕಾಶ ಬಣ್ಣದ ಪತ್ತಲವನ್ನುಟ್ಟಿದಾಳೆ. ತಲೆ ನೆಯಿದು ಜಡೆಬಿಟ್ಟಿದಾಳೆ. ಮುಡಿಯಲ್ಲಿ ಏನೋ ಒಂದಿಷ್ಟು ಬಾಡಿದ ಹೂ. ಕೈಯ ಹಗ್ಗವನ್ನು ಅತ್ತಿತ್ತ ತಿರುಗಾಡಿಸುತ್ತ ಸೂರ್ಯಕಿರಣಗಳು ಮುಖಸ್ಪರ್ಶ ಮಾಡದಂತೆ— ತಡೆಯುವುದಕ್ಕಾಗಿ ತನ್ನ ಕರಪಲ್ಲವವನ್ನೆ ಅಡ್ಡ ಹಿಡಿದು ಕೊಳ್ಳುತ್ತ "ಸೇತೂಽಽ—!" ಎಂದು ಕೂಗಿದಳು. ಐತಪ್ಪನ ನಾಲ್ಕೂ ಬದಿಯಲ್ಲಿಯೂ ಮಾರ್ದನಿಗೊಂಡಿತು:— "ಸೇತೂಽಽ—!" ಐತಪ್ಪ ಚಕಿತನಾಗಿ ಕೂಗಿದ "ಲೇ—ಶಾನ್ತೂ! ದನ ಸಿಕ್ಕಿಲ್ವೇನೆ?"

ಐತಪ್ಪನ ಮನೆಯ ಹಸುವು ಎಲ್ಲೋ ತಪ್ಪಿಸಿಕೊಂಡಿತ್ತು. ಅದನ್ನು ಹುಡುಕಾಡುತ್ತ ಶಾನ್ತಾ ಅಲ್ಲಿ ಅಲೆಯುತ್ತಿದ್ದಳು.

"ಅಯ್ಯ—ಇಲ್ಲಾಂದ್ರೆ. ಇವುಗಳ ಖರ್ಮದಿಂದ ನಾನು ಸತ್ತೆನಲ್ಲ" ವೆನ್ನುತ್ತ ಹಗ್ಗವನ್ನು ಬಿಸುಟು ಅಲ್ಲೆ ಕುಳಿತುಬಿಟ್ಟಳು ಶಾನ್ತಾ! ಆಕೆ ಕುಳಿತಳೋ— ಅಥವಾ ಏನಾದರೂ ಮಂತ್ರಗಿಂತ್ರ ನಡೆಯಿಸಿದಳೋ

ಯಾರಿಗೆ ಗೊತ್ತು! ಗಟ್ಟಿಯಾಗಿ— ಕದಲದೆ— ಕುಳಿತಿದ್ದ ಐತಪ್ಪ ಜಗ್ಗನೆ ಎದ್ದು ಆ ಕಡೆಗೆ ಹೊರಟುಬಿಟ್ಟ.

ಐತಪ್ಪನೂ ಶಾನ್ತಾಳೂ ಸೇರಿಯೆ ಹಸುವಿನ ಪತ್ತೆಗೆ ತೊಡಗಿದರು. "ಥೂ! ನೀನು ಬರಿಯೆ ದಂಡ ಶಾನ್ತಾ. ಮೂರು ಹೊತ್ತು ಊಟಮಾಡ್ಲಿಕ್ಕೆ ಆದೀಯೆ! ನೋಡಲ್ಲಿ—" ಎಂದು ಐತಪ್ಪ ಕಲ್ಪಂಡೆಯ ಹತ್ತಿರವಿದ್ದ ಬಿದಿರ ಹಿಂಡಿಲಿನ ಕಡೆಗೆ ಕೈಚಾಚಿ ತೋರಿಸಿದ. ಶಾನ್ತಾಳಿಗೆ ಗಂಡ ಬೈದರೂ ಆನಂದ. ಹೊಡೆದರೂ ಆನಂದ. ತಮಾಶೆ ಮಾಡಿದರೂ ಆನಂದ. ತಾನು ಸೋತಿದ್ದರೂ ದನ ಸಿಕ್ಕಿತಲ್ಲಾ ಎಂಬ ಹಿಗ್ಗಿನಿಂದ ನಗುತ್ತ ಆ ಕಡೆಗೆ ನೋಡಿದಳು. ಹೌದು— ಅಲ್ಲಿ ದಟ್ಟವಾಗಿ ಬೆಳೆದಿದ್ದ ಹಸುರು ಹುಲ್ಲಿನ ರಾಶಿಯಲ್ಲಿ ದನ ಮೈಮರೆತು "ಆತ್ಮಸಮಾರಾಧನೆ"ಗೆ ತೊಡಗಿತ್ತು. ಶಾನ್ತಾ ಓಡಿಯೋಡಿ ಹೋಗಿ "ನೇತೂ" ಎಂದಳು ಅದು ಅವಳ ಮಮತೆಯ ದನ, ಆಕೆ ಕರೆದುದಕ್ಕೆ ಹೂಂಗುಟ್ಟಿತು. ಶಾನ್ತಾ ಅದರ ಕೊರಳಿಗೆ ಹಗ್ಗ ಹಾಕಿ ಎಳಕೊಂಡು ಮನೆಯ ದಾರಿ ಹಿಡಿದಳು. ಹಿಂಬದಿಯಲ್ಲಿ ಐತಪ್ಪ ವಿನೋದಮಾಡುತ್ತ ಬರುತಿದ್ದ.

* * * *

ಹಸುವನ್ನು ಹಟ್ಟಿಯಲ್ಲಿ ಕಟ್ಟಿ— ಕರೆದು ಶಾನ್ತಾ ಒಳಗೆಬಂದಳು. ಪಡಸಾಲೆಯಲ್ಲಿ ಐತಪ್ಪ ಕುಳಿತಿದ್ದ. "ಶಾನ್ತಾ— ಕಡಲೆಯ ಕಾಳು ನಿನ್ನೆಯೆ ಮುಗಿದಿದೆಯೆ?" ಎಂದ. ಶಾನ್ತಾಳಿಗೆ ನಾಚುಗೆಯಾಯಿತು. ನಿನ್ನೆ ಆಕೆಗೇಕೋ ಬಹಳ ಬಾಯಿತೀಟವುಂಟಾಗಿತ್ತು. ಏನನ್ನಾದರೂ ತಿನ್ನಲೆ ಬೇಕೆನಿಸಿತ್ತು. ಒಂದಷ್ಟು ಹುರಿಗಡಲೆಯನ್ನು ಮಾಡಿ ತನ್ನಾಸೆಯನ್ನು ತೀರಿಸಿಕೊಂಡಿದ್ದಳು. ಐತಪ್ಪ ಇದನ್ನು ಕದ್ದು ನೋಡಿದ್ದ. ಐತಪ್ಪನ ಮಾತು ಕೇಳಿ ಮೂಲೆಯಲ್ಲಿ ಕುಳಿತಿದ್ದ ತುಕ್ರಿ— ಐತಪ್ಪನ ಮುದಿತಾಯಿ ನಕ್ಕು ಬಿಟ್ಟಳು. ಬೀರ— ಐತಪ್ಪನ ಅಕ್ಕನ ಮಗ— "ಹೌದು ಮಾಮಾ. ಕಡಲೆ ಲಾಯಕ್ಕಿದೆ" ಎಂದು ನಕ್ಕನು. ಶಾನ್ತಾಳಿಗೆ ಈ ಪ್ರಸಂಗದಿಂದ ಒಳಗೊಳಗೆ ಒಳ್ಳೆಯ ಆನಂದವಾಗುತಿತ್ತು. ಆದರೆ ಹೊರಗಡೆ ಹುಸಿ ಮುನಿಸನ್ನು

ತೋರ್‍ಸಿಸುತ್ತ "ಇಸ್ಸಿ ದೇವರೆ! ಮಕ್ಕಳಂತೆ ಮಾಡ್ತೀರಲ್ಲ." ಎಂದು ತಾನೂ ನಕ್ಕುಬಿಟ್ಟಳು. ಹೊರಗಡೆ ಗುಬ್ಬಚ್ಚಿಯೊಂದು ಇವಳ ನಗುವಿನ ಅನುಕರಣೆ ಮಾಡಿತು.

"ಇಲ್ಲಿ ಕೊಡೆ ಶಾನ್ತಾ"

"ಎಲ್ಲಿನೇಂದ್ರೆ—?"

"ಓ—ಆ ಕರಡಿಕೆಯಲ್ಲಿ."

ಶಾನ್ತಾ ಒಳಗೋಡಿ ಆ ಕರಡಿಗೆಯನ್ನು ತಂದು ಒಂದಿಷ್ಟು ಐತಪ್ಪನ ಕೈಗೆ ಸುರುವಿ "ಆಯಿತೇ ಬಯಕೆ?" ಎಂದು ಓರೆ ನೋಟದಿಂದ ನೋಡಿದಳು. "ಬಯಕೆ ನನಗಲ್ಲ ನಿನಗೆ" ಎನ್ನುತ್ತ ತನ್ನ ಬಾಳಿನ ದೇವತೆಯನ್ನು ಕಣ್ತುಂಬ ನೋಡಿದ. ಆಕೆ ಒಂದಿಷ್ಟು ಕಡಲೆಯ ಕಾಳನ್ನು ಬೀರನ ಕೈಗೂ ಇತ್ತು "ಅತ್ತೆ— ನಿನಗೆ ಬೇಕೆ?" ಎಂದಳು. ಅತ್ತೆಯ ಬಾಯಿಯಲ್ಲಿ ಹಲ್ಲುಗಳಿದ್ದರೆ ತಾನೆ! ಎಲ್ಲರೂ ನಕ್ಕು ಬಿಟ್ಟರು.

* * * *

ಬಾವಿಕಟ್ಟೆಯಲ್ಲಿ ಕುಳಿತು ಆಕೆ ಯಾವುದೋ ಪಾತ್ರೆಯನ್ನು ತೊಳೆಯುತ್ತಿದ್ದಳು. ಸೂರ್ಯನು ಮುಳುಗಿದ್ದನಷ್ಟೆ. ಅವಳ ಹತ್ತಿರವೆ ಹೋಗಿ ಕುಳಿತು ಐತಪ್ಪ ಮಾತಿಗೆ ಮೊದಲುಮಾಡಿದ.

"ಹೌದೆ— ಶಾನ್ತಾ ನಿನಗೀಗ ಎಷ್ಟು ತಿಂಗಳೆ?"

"ಅಯ್ಯೋ—! ನೀವಿಲ್ಲಿಂದ ಹೋಗೀಂದ್ರೆ"

"ಎಲ್ಲಿಗೆ ಹೋಗಬೇಕು ಮಾರಾಯ್ತಿ?"

"ಖುಶಿ ಬಂದಲ್ಲಿಗೆ"

"ಅಂದರೆ—?"

"ಅಂದರೆ—ಗಿಂದರೆ—ತೊಂದರೆ"

"ಅಬಬಬ! ಏನಿದು ಕಾವ್ಯ ಹೇಳ್ತೀಯಾ?"

"ಕೆಲಸ ಸಾಗೋದಿಲ್ಲ."

"ನಿದಾನವಾಗಿ ಸಾಗಲಿ."

"ರಾತ್ರೆ ಊಟ ತಡವಾಗತ್ತೆ."

"ಆಗಲಿ"

ಶಾನ್ತಾ ನಕ್ಕುಬಿಟ್ಟಳು. ಚೆನ್ನಾಗಿ ನಕ್ಕುಬಿಟ್ಟಳು.

"ಯಾಕೆ ಶಾನ್ತಾ! ನಾನು ನಿನ್ನ ಹತ್ತಿರ ಕುಳಿತಿದ್ದರೆ ನಿನಗೆ ದುಃಖ ವಾಗುತ್ತಿದೆಯೆ?"

ಶಾನ್ತೆಯ ಮೃದುವಾದ ಹೃದಯದಲ್ಲಿ ಈ ಪ್ರಶ್ನೆ ಬಹಳ ಹೆದರಿಕೆ ಯನ್ನು ಹುಟ್ಟಿಸಿತು. ಆ ಮುಗ್ಧ ಬಾಲಿಕೆ ಈ ಮಾತಿನಿಂದ ತುಂಬ ಕಳವಳ ಕ್ಕೀಡಾದಳು. ಮದುವೆಯಾಗಿ— ಸರಸದಾಂಪತ್ಯಕ್ಕೆ ಆರಂಭವಾಗಿ— ಬದುಕಿನ ಬಳ್ಳಿ ಚಿಗುರತೊಡಗಿ ಎರಡು ವರ್ಷವಾಗಿತ್ತು. ಈ ಯೆರಡು ವರ್ಷಗಳಲ್ಲಿ ಶಾನ್ತಾ ಎಷ್ಟೋಂದು ಪ್ರೀತಿಸುವುದಕ್ಕೆ ಕಲಿತಿದಾಳೆ. ಐತಪ್ಪ ಅವಳ ಪ್ರಾಣ. ಅವಳ ದೇವರು. ಹೆಚ್ಚಿನ ವಿದ್ಯಾವತಿಯಲ್ಲವಾದರೂ ಅನೇಕ ದೊಡ್ಡ ಗುಣಗಳು ಆಕೆಯಲ್ಲಿ ಸಹಜವಾಗಿ ನೆಲಸಿದಾವೆ.

ನೋಟಕ್ಕೂ ಶಾನ್ತಾ ಚೆಲುವೆಯಾದ ಹುಡುಗಿ. ಬಿಳಿದಾದ ಮೈಗಾನ್ತಿ. ಸುಂದರವಾದ ಮೊಗ. ಮೆಚ್ಚಬೇಕಾದ ಮೈಗಟ್ಟು. ತಲೆಯ ಜಡೆ ಕಾಲ್ಗಂಟಿನವರೆಗಿಳಿದು ಮುಖದ ರಮಣೀಯತೆಯನ್ನು ಇಮ್ಮಡಿಸಿತ್ತು. ಹೊಸ ಕಾಲದ ಬೆಡಗು ಬಿನ್ನಾಣಗಳನ್ನು ಕಲಿಯದಿದ್ದರೂ ಆಕೆಯ ಮುಖ ದಲ್ಲಿ ದಿವ್ಯಶ್ರೀಯೊಂದು ಹಾಸ್ಯವಾಡುತಲಿತ್ತು. ಹಾಗೆಂದು ಸೊಗಸು ಗಾತಿಯಲ್ಲ. ಮನೆಗೆಲಸದಲ್ಲಿ ಒಂದಿಷ್ಟು ನಿರುತ್ಸಾಹವಿಲ್ಲ. ಶಾನ್ತಾ ಐತಪ್ಪನ ಪ್ರಶ್ನೆಗೆ ಉತ್ತರವಾಗಿ ನಗುತ್ತ ಹೇಳಿದಳು. "ಅಯ್ಯ— ಹಾಗನ್ನಬೇಡಿ. ಯುಗ ಮುಗಿಯುವ ವರೆಗೂ ನೀವು ನನ್ನ ಹತ್ತಿರವೆ ಕುಳಿತಿರಬೇಕು."

"ನಿನಗೆ ಅಷ್ಟು ಪ್ರೀತಿ ಇದೆಯೆ ನನ್ನ ಮೇಲೆ."

"ಹುಂ—ಹುಂ" ತಲೆಯಡಿಯಿಟ್ಟಳು ಶಾನ್ತಾ!

•ಐತಪ್ಪನಿಗೆ ಹಿಡಿಸಲಾರದ ಹಿಗ್ಗು. ಎಂತಹ ಜತೆಗಾತಿ ಸಿಕ್ಕಿದಾಳೆ ಎಂದು ಬಹಳ ಹೆಮ್ಮೆಯುಂಟಾಯಿತು. ಯಾರಿಗೆ ಆಗಲಾರದು? ಕೈಯಿಂದ ಆಕೆಯ ಗಲ್ಲವನ್ನು ಸವರುತ್ತ ಐತಪ್ಪನಂದ— "ನನ್ನ ಚಿನ್ನ, ನನಗೂ ನೀನೆಂದರೆ ಜೀವ." ಶಾನ್ತಾಳ ಕಂಗಳಲ್ಲಿ ನೀರು ಹರಿಯಿತು. ತಾನು ಎಷ್ಟೊಂದು ಧನ್ಯಾತ್ಮಳು ಎಂದುಕೊಂಡು ಹರ್ಷಪುಲಕಿತೆಯಾದಳು.

"ಐತೋಽ" ಎಂದು ಮನೆಯ ಕಡೆಯಿಂದ ಯಾರೋ ಕೂಗಿದಂತಾಯ್ತು. ಅದು ಆ ಮುದುಕಿಯ ಕೆಲಸ. ಅಷ್ಟರಲ್ಲಿ ಅಲ್ಲಿಗೆಯೇ ಬೀರ ಬಂದು ಹೇಳಿದ- "ಮಾವ, ಅತ್ತೆಯಃ ಅಪ್ಪ—ಕಾನ್ತಪ್ಪಯ್ಯ ಬಂದಿದಾರೆ."

"ತಿರುಗಿ ಪ್ರಾರಬ್ಧ ಗಂಟುಬಿತ್ತು— ಈ ಶನಿಯೇಕೆ ಬಂದಿತೋ"— ಎಂದುಕೊಂಡು ಐತಪ್ಪ ಮನೆಯ ಹಾದಿಹಿಡಿದ. ತಂದೆ ಬಂದುದನ್ನು ಕೇಳಿ ಶಾನ್ತಾಳಿಗೆ ಹಿಡಿಸಲಾರದ ಸಂಭ್ರಮವಾಯಿತು. ಪಾತ್ರೆಯನ್ನು ಬೇಗ ಬೇಗನೆ ತೊಳೆದುಕೊಂಡು ತಾನೂ ಮನೆಗೆ ನಡೆದಳು.

ಐತಪ್ಪ ಮನೆಗೆ ಬರುವುದರೊಳಗಾಗಿಯೆ ಮುದುಕಿ—ಚಾಪೆ ಹಾಸಿ ತಾಂಬೂಲದ ತಾಟನ್ನಿಟ್ಟು ಕಾನ್ತಯ್ಯನನ್ನು ಉಪಚರಿಸಿದ್ದಳು. ಕಾನ್ತಯ್ಯ ಮುಗಿಲಿನ ಕಡೆಗೆ ನೋಡುತ್ತ ಕುಳಿತಿದ್ದ. ಆಗ ಕತ್ತಲು ಏರತೊಡಗಿತ್ತು. ಐತಪ್ಪ ಬಂದವನೆ "ಓಹೋ ಮಾವಯ್ಯ. ಏನು ಬಂದಿರಿ? ಅತ್ತೆಗೆ ಕುಶಲ ತಾನೆ?" ಎಂದು ಪ್ರಶ್ನಿಸಿದ. ತನ್ನ ಕುಶಲವನ್ನು ವಿಚಾರಿಸದೆ ಅತ್ತೆಯ ಕುಶಲವನ್ನೆ ವಿಚಾರಿಸಿದನಲ್ಲಾ ಎಂದು ಭಾವಿಸುತ್ತಿರುವಾಗಲೆ ಆನಂದ ಬಾಷ್ಪದಿಂದ ಸಜಲನಯನೆಯಾಗಿದ್ದ ಶಾನ್ತಾ ಬಂದು "ಏನಪ್ಪಾ— ಬಂದೆಯಾ. ಅಮ್ಮ ಸೌಖ್ಯವಾಗಿದಾಳೆಯಾ?" ಎಂದು ಕೇಳಿ ಒಳಗೆ ತೆರಳಿದಳು "ಎಲ! ಹುಡುಗಿ ಅಳುತ್ತಿದೆಯೇಕೆ?" ಎಂಬ ಭಾವನೆ ಬೇರೆ ಹುಟ್ಟಿಕೊಂಡಿತು. ಹುಡುಗಿಯ ಕಣ್ಣೀರಿನ ಕಾರಣ ಕಾನ್ತಯ್ಯನಿಗೇನು ಗೊತ್ತು! ಈ ನಮೂನೆ ಕಣ್ಣೀರಿಳಿಯಿಸುವ ಅಳಿಯ ಯಾರಿಗೆ ಬೇಡ?

"ಸ್ವಲ್ಪ ಕಾಫಿಮಾಡಿಸಲೆ?" ಐತಪ್ಪ ಕೇಳಿದ.

"ಒಂದೂ ಬೇಡ ಐತಪ್ಪ. ಎಲ್ಲ ಮುಗಿಸಿ ಬಂದೆ."

"ಏನು ಬರೋಣಾಯಿತು?"

"ನೋಡು ಐತಪ್ಪ. ಮರ್ಯಾದೆಯೆಂಬೋದು ಇಬ್ಬರಿಗೂ ಒಂದೆ. ನನ್ನ ಮರ್ಯಾದೆ ಹೋಗೋದು ಬೇರೆ—ನಿನ್ನ ಮರ್ಯಾದೆ ಹೋಗೋದು ಬೇರೆಯಲ್ಲ. ಈಗೊಂದ್ಯೆನೂರು ರೂಪಾಯಿ ಸಿಗದೆ ಹೋದರೆ ಮನೆ—ಮಾರುಗಳೆಲ್ಲ ಹರಾಜಾಗಿ ಹೋಗುತ್ತಿದೆ. ನಮ್ಮ ಪೈಕಿ ನೀನೆಯೆ ಸ್ವಲ್ಪ ದುಡ್ಡುಳ್ಳವ. ನನಗೆ ಬೇರೆ ಯಾರೂ ದಿಕ್ಕಿಲ್ಲ ನೋಡು. ಬೇರೆಯುವರೊಡನೆ 'ದೇಹಿ'ಯೆನ್ನೋದಕ್ಕೆ ನನ್ನಿಂದ ಸಾಧ್ಯವಿಲ್ಲ. ನಿನಗಿದು ಗೊತ್ತಿಲ್ವೆ? ಏನಾದರೂ ಮಾಡಿ ಒಂದ್ಯೆನೂರು ರೂಪಾಯಿ ನೋಟಿನಮೇಲೆ ಕೊಟ್ಟುಬಿಡಪ್ಪ. ಆ ಮೇಲ್ಮನೆ ಮಜಲನ್ನು ಮಾರಿ ನಿನಗೆ ರೂಪಾಯಿ ಕೊಡುತ್ತೇನೆ. ಈಗಲೇ ಮಾರೋಣವೆಂದರೆ ಕಮ್ಮಿಗೆ ಕೇಳುತ್ತಾರೆ. ಅಥವಾ ನನ್ನ ಅನಂತರ ಉಳಿದುದೆಲ್ಲಾ ನಿನಗೆಯೆ ಅಲ್ಲವೊ ಐತಪ್ಪ? ಮಾವನ ಮಾನ ಕಾಯುವುದು ನಿನ್ನ ಹೊಣೆಯಲ್ಲವೊ ಐತಪ್ಪ? ಮನುಷ್ಯರಿಗೆ ಮನುಷ್ಯರು ಉಪಕಾರ ಮಾಡದಿದ್ದರೆ ಯಾರು ಮಾಡಬೇಕಪ್ಪ! ನನಗೇನಾದರೂ ನಿನ್ನ ಮೇಲೆ ದ್ವೇಷವಿದೆಯೋ ಐತಪ್ಪ? ಏನಾದರೂ ಸಿಟ್ಟಿನಿಂದ ಹೆಚ್ಚು ಕಮ್ಮಿ ಹೇಳಿದ್ದರೆ ಕ್ಷಮಿಸಿಬಿಡು. ಒಂದು ಬಾರಿಗೆ ಕೈ ಬಿಡಬೇಡ."

"ನಾನು ಆವೊತ್ತೆ ಅಂದಿದ್ದೆನಲ್ಲಾ.................."

"ಹಾಗೆಲ್ಲ ಹಟಮಾಡಬಾರದು ಐತಪ್ಪ..... ............"

"ಹಟವಲ್ಲ. ನನ್ನ ಹತ್ತಿರವಿರೋದೇನೂಂತನ್ನೋದು ಮಾವನವರಿಗೆ ಚೆನ್ನಾಗಿ ಗೊತ್ತು. ಅದನ್ನೆಲ್ಲ ನರಸಿಂಹ ಭಟ್ರಿಗೆ ಕೊಟ್ಟು ಆಗಿದೆ. ಇನ್ನೆಲ್ಲಿಂದ ತರಲಿ? ಮಾವನವರು ಕೋಪಿಸಿಕೊಳ್ಳಬಾರದು. ಬೇರೆಲ್ಲಿಯಾದರೂ ನೋಡೋಣಾಗಲಿ..........."

"ಐತಪ್ಪ...................."

"..........................."

"ಹೋಗಲಿ ಬಿಡು. ರೂಪಾಯಿಯಿಲ್ಲದಿದ್ದರೆ ಬೇಡಪ್ಪ. ಆ ರಂಗ ರಾಯರು ರೂಪಾಯಿ ಕೊಡುತ್ತೇನೆ ಎಂದು ಹೇಳಿದಾರೆ. ನೀನೂ ನಾನೂ ಜೋಯಿಂಟಾಗಿ ನೋಟು ಬರೆದುಕೊಡಬೇಕಂತೆ. ಅದಕ್ಕಾದರೂ ಒಪ್ಪು."

ಮಾವನಿಗೆ ಉಪಕಾರ ಮಾಡುವುದು ಹೆಚ್ಚೋ— ದುಡ್ಡನ್ನು ಉಳಿಸಿ ಕೊಳ್ಳುವುದು ಹೆಚ್ಚೋ— ಎಂಬ ಸಮಸ್ಯೆಯಲ್ಲಿ ಐತಪ್ಪ ದಿಕ್ಕುಗಾಣದಾದ. ಕೆಲಕಾಲ ಮೌನವಾಗಿದ್ದು ಮತ್ತೆ ಹೇಳಿದ:—

"ಈಯೊಂದು ಅಂಶದಲ್ಲಿ ಮಾವನವರು ನನ್ನನ್ನು ಒತ್ತಾಯಪಡಿಸಿದರೆ ದೇವರಾಣೆ. ಬೇರೇನಾದರೂ ಸಹಾಯಮಾಡುತ್ತೇನೆ."

"ಐತಪ್ಪ.... . .. ನೀನು ತಿಳಿವುಗೆಟ್ಟು ಮಾತಾಡುತ್ತಿ. ವಿಚಾರ ಮಾಡಿ ನೋಡು. ಹಣ ಕೊಡದೆ ಹೋದರೆ ನನ್ನ-ನಿನ್ನ-ಋಣಾನುಬಂಧ ಇಂದಿಗೆ ಮುಗಿದುಹೋಗುತ್ತೆ."

"ಮುಗಿಯುವ ಹೊತ್ತು ಬಂದರೆ ನಾನೇನು ಮಾಡಲಿಕ್ಕಾಗತ್ತೆ ಮಾವಯ್ಯ!" ನಿರ್ಧಾರದಲ್ಲಿಯೆ ಉತ್ತರಿಸಿದ ಐತಪ್ಪ.

"ಐತಪ್ಪ! ಸ್ವಲ್ಪ ವಿಚಾರ ಮಾಡಿ ಮಾತನಾಡು. ಉಪಕಾರಕ್ಕೆ ಬೀಳದ ಹಣವಿದ್ದೇನು ಪ್ರಯೋಜನ? ಉಪಕಾರ ಮಾಡದ ಮನುಷ್ಯ ನಾಯಿಗೆ ಸಮಾನ ....!" ಮಾತಿನಲ್ಲಿ ನಿಷ್ಠುರಭಾವ ತುಂಬಿತ್ತು.

"ನಿಮ್ಮ ಮಾತು ನನಗೂ ಅರ್ಥವಾಗುತ್ತೆ ಮಾವಯ್ಯ. ಹೆಚ್ಚಿಗೆ ಮಾತನಾಡುವುದೆ ವ್ಯರ್ಥ. ಆ ವಿಚಾರವೊಂದು ಸದ್ಯಕ್ಕೆ ಸಾಧ್ಯವಿಲ್ಲ." ಸಮಭಾವದಿಂದ ಐತಪ್ಪ ಹೇಳಿದ.

"ಖಂಡಿತ . . ?"

"ಖಂಡಿತ!"

"ಐತಪ್ಪ........ ...!"

"........ ...................."

"ನೀನು ಮನುಷ್ಯನೋ? ನೀನು ನಾಯಿ! ಇನ್ನೊಬ್ಬರ ಸುಖ-ದುಃಖ–ತಾನು ತನ್ನವರು ಎಂಬ ಜ್ಞಾನ — ಇಲ್ಲದ ನೀನು ಶುದ್ಧ ನಾಯಿ. ನಿನ್ನ ಹತ್ತಿರ ಬಿಕ್ಕೆ ಬೇಡಬಂದದ್ದು ನನ್ನದೇ ತಪ್ಪು. ನಿನ್ನದೇನೂ ತಪ್ಪಿಲ್ಲ. ಸ್ವಭಾವಕ್ಕೆ ಸರಿಯಾಗಿಯೇ ಮಾಡಿದ್ದೀ. ಹೌದು — ತಪ್ಪು ನನ್ನದೆ. ."

"ಬೇಡಾಗದ ಮಾತು ತೆಗೆದು ಏನು ಪ್ರಯೋಜನ? ಬಂದ ಕೆಲಸ ವನ್ನಷ್ಟೆ ಮಾಡಿಹೋಗಬೇಕು. ಹಣ ಕೊಡುವುದೂ ಬಿಡುವುದೂ ನನ್ನ ಅಧಿಕಾರಕ್ಕೆ ಸೇರಿದ್ದು. ನೀವು ಕೇಳುವ ಅಧಿಕಾರಿಗಳು ಮಾತ್ರ. ಕೊಡದಿದ್ದರೆ ನನ್ನ ಮೇಲೆ ಕೋಪ ಮಾಡುವುದು ನ್ಯಾಯವಲ್ಲ."

"ನನಗೆ ನ್ಯಾಯ ಕಲಿಸಿಕೊಡಬೇಡ ನೀನು. ನೀನು ಯಾರೋ ಏನೋ–ನಾನು ಮಾತ್ರ, ನನ್ನವ — ನನ್ನ ಹುಡುಗ — ಎಂತ ಭ್ರಮಿಸಿದೆ. ಭ್ರಮೆ ನಿರಸನವಾಯಿತು."

"ಸುಮ್ಮಗೆ ಜಗಳ ತೆಗೆಯುತ್ತೀರಿ."

"ನಿನ್ನ ಹತ್ತಿರ ಜಗಳ ತೆಗೆಯುವ ಅವಶ್ಯಕತೆಯೆ ನನಗಿಲ್ಲ... .. ... .. ಆದರೆ ಅಯ್ಯೋ . ..ನಾನು ಸೂರಣ್ಣನನ್ನು ನೋಡಿ ನನ್ನ ಹುಡುಗಿಯನ್ನು ಕೈಯಾರೆ ಕೊಂದೆ. ಸಿಂಹದ ಹೊಟ್ಟೆಯಲ್ಲಿ ನಾಯಿ ಹುಟ್ಟೀತು ಎಂಬುದು ತಿಳಿಯದೆ ಮಗುವನ್ನು ಕೊಂದೆ."

ಇದು ವರೆಗೆಯೂ ತಾಳ್ಮೆಯಿಂದಿದ್ದ ಐತಪ್ಪನ ಹೃದಯದಲ್ಲಿ ಕೋಪದ ಕಿಡಿ ಹೊರ ಹೊಮ್ಮಿತು. ವೈರದ ಝುಂಝಾವಾತ ಬೀಸತೊಡಗಿತು.

"ನಿಮ್ಮ ಮಗಳನ್ನ ಮದಿವೆ ಮಾಡಿಕೊಂಡೇ ನಾನೂ ಹಾಳಾದದ್ದು. ಪೆರ್ಡೂರು ಸಾಂತಪ್ಪ ಹೆಗ್ಡೇರು ಸಾವಿರಾರು ರೂಪಾಯಿ ಚಿನ್ನ—ಸಾವಿರ ರೂಪಾಯಿ ನಗದು ಹಣ—ಗಳ ಜತೆಗೆ ಹುಡುಗಿಯನ್ನು ಕೊಡುತ್ತೇನೆ ಎಂದಿದ್ದರು. ಆದರೆ ಈ ದರ್ವೇಶಿ—ದರಿದ್ರ ಹೆಣ್ಣಿನ ಕೈ ಹಿಡಿಯುವ ಗ್ರಹಚಾರ ಕಾದು ಕುಳಿತಿರುವಾಗ ನನ್ನನ್ನು ಕಾಡದೆ ಬಿಟ್ಟೀತೆ?"

"ನಾಲಿಗೆ ಬಿಗಿ ಹಿಡಿದು ಮಾತನಾಡು. ಶಾನ್ತಾ ರತ್ನದಂಥ ಹುಡುಗಿ."

"ರತ್ನದಂಥ ಹುಡುಗಿಯನ್ನು ಬೇಕಾದ್ರೆ ಕರ್ಕೊಂಡುಹೋಗಬಹುದು. ಕರ್ಕೊಂಡು ಹೋದ್ರೆ ನನ್ನ ಮನೆ ಉದ್ಧಾರ ಮಾಡಿದ ಪುಣ್ಯಬರುತ್ತೆ."

"ಇಷ್ಟು ಅಹಂಕಾರ!"

ಬದುಕು ರಸವತ್ತಾಗಬೇಕಾದರೆ ಮನಸ್ಸಿನಲ್ಲಿ ಆನಂದವಿರಬೇಕು. ಮನಸ್ಸಿನ ಸ್ವಾಸ್ಥ್ಯಕ್ಕಾಗಿ ವಿದ್ಯೆಯೋವಿರಬೇಕು. ವಿದ್ಯೆಯಿಂದ ಒಳ್ಳೆಯ ವಿವೇಕವೂ ಸಂಸ್ಕಾರವೂ ದೊರೆತು ಅದರಿಂದ ಬಾಳ್‌ಬಳ್ಳಿ ನವುರಾಗಿ ಚಿಗುರೊಡೆದು ಬೆಳೆಯಬೇಕು. ಹೀಗೆ ಜೀವಿಕೆ ನಯಗೊಂಡಿದ್ದರೆಯೆ ಜೀವನದಲ್ಲಿ ಆನಂದ ತುಂಬುವುದು. ಬಾಳಿನಲ್ಲಿ ಜಗಳಗಳು ಬರುವುದು ಅನಿವಾರ್ಯ. ಆದರೆ ಅದನ್ನೆದುರಿಸುವುದು—ತಡೆಯುವುದು ಬುದ್ಧಿಯ ಕಾರ್ಯ. ಬುದ್ಧಿಗೆ ಅಂತಹ ಸಂಸ್ಕಾರ ಸಿಗದೆ ಹೋದರೆ ಜೀವಿಕೆ ನಯ ಗೊಳ್ಳಬೇಕು ಹೇಗೆ? ಐತಪ್ಪ — ಕಾನ್ತಯ್ಯ — ಇಬ್ಬರೂ ಅಶಿಕ್ಷಿತರೆ. ಮಾತು ಬೆಳೆದು ಜಗಳದ ಹೆದ್ದಾರಿಗೆ ಬಂದಿಳಿದಾಗಲೂ ಅವರಿಗೆ ಅದರ ಜ್ಞಾನವಿದ್ದಿಲ್ಲ. ಸಿಟ್ಟು ನೆತ್ತಿಗೇರಿದಾಗ ಮುನ್ನೋಡುವ ಶಕ್ತಿ ಕೂಡ ಲುಪ್ತ ವಾಗುತ್ತದೆ. ಸಿಟ್ಟಿನ ಕಾಲದಲ್ಲಿ ಒಂದು ತಪ್ಪು—ಒಂದು ಅವಿವೇಕ— ನಡೆದಿರಲಿ. ಆ ಬಳಿಕ — ಅದು ತಪ್ಪೆಂದು ತಿಳಿದರೂ, ಜನ ಅದರ ಸಮ ರ್ಥನೆಯ ಹಾದಿಯಲ್ಲಿಯೆ ಮುಂದುವರೆಯುವುದು. ತಾನು ನಾಶವಾದರೂ ಸರಿಯೆ. ಸ್ವಪಕ್ಷ ಸಮರ್ಥನೆಯ ಛಲ ಬಿಡುವುದಕ್ಕಾಗುವುದಿಲ್ಲ. ಈ ಬಗೆಯ ಮನೋಭೂಮಿಕೆಯುಳ್ಳ ಮಂದಿ ಬಹಳ. ಐತಪ್ಪ—ಕಾನ್ತಯ್ಯ ಇಬ್ಬರೂ ಈ ಜಾತಿಗೆಯೆ ಸೇರಿದವರು. ಹಾಗಾಗಿ "ಇಂತಹ ನೀಚನ ಮಗಳನ್ನು ಇಟ್ಟುಕೊಳ್ಳುವುದೆ ಬೇಡ"ವೆಂಬಂತಹ ನಿರ್ಧಾರಕ್ಕೆ ಬಂದು ಮುಟ್ಟಿದಾನೆ ಐತಪ್ಪ. "ಇಂತಹ ಹೊಲೆಯನ ಮನೆಯಲ್ಲಿ ಮಗಳನ್ನು ಇಟ್ಟಿ ರಲೆ ಬಾರದು" ಎಂದು ನಿಶ್ಚಯಿಸಿದಾನೆ ಕಾನ್ತಯ್ಯ. ಹೆಂಡತಿಯ ಮೇಲೆ ಐತಪ್ಪನಿಗಿದ್ದ ಪ್ರೇಮ ಕೋಪದ ಜ್ವಾಲೆಯ ಮುಂದೆ ಕರಗಿಹೋಯಿತು. ಹಣ ಕೊಡದ ತಪ್ಪಿಗಾಗಿ ದಾಂಪತ್ಯವಿಚ್ಛೇದ ಮಾಡುವುದು ತಪ್ಪು ಎಂಬ ನೀತಿಯ ತಿಳುವಳಿಕೆಯೂ ಕಾನ್ತಯ್ಯನ ಸಿಟ್ಟಿನ ಮುಂದೆ ಓಡಿಹೋಯಿತು!

ಇವರಿಬ್ಬರ "ಕುರುಕ್ಷೇತ್ರ"ವನ್ನು ಕಂಡು ಶಾನ್ತಾ ದಿಗಿಲುಗೊಂಡಳು. ಅವಳ ಮನಸ್ಸಿನಲ್ಲಿಯೂ ಹಲವು ವಿಚಾರಗಳ ಮಂಥನವುಂಟಾಯಿತು. "ಅಪ್ಪ ದೇವರೆ, ಹಣಕ್ಕಾಗಿ ನನ್ನ ತಂದೆ ಅವರನ್ನು ಅಷ್ಟು ಒತ್ತಾಯಿಸುವುದೇಕೆ? ತಪ್ಪಲ್ಲವೆ ಅದು?" ಎಂದು ಒಮ್ಮೆ ನೆನೆಸುವಳು. "ಎಲ–ತಂದೆ ಅಷ್ಟು ಅಂಗಲಾಚಿ ಬೇಡುವಾಗಲೂ ಇವರು ಹಣಕೊಡಬೇಕಿತ್ತು. ಕೊಡದೆ ಇದ್ದುದು ತಪ್ಪಲ್ಲವೋ?" ಎಂದು ಒಮ್ಮೆ ಎಣಿಸುವಳು. ಎರಡೂ ತಪ್ಪು ಹೌದು. ಯಾರ ತಪ್ಪು ಬಲೀಯವಾದುದು ಎಂಬುದನ್ನು ವಿಮರ್ಶಿಸುವಷ್ಟು ಜಾಣ್ಮೆ ಆಕೆಗಿದ್ದಿಲ್ಲ. ಈ ಗೊಂದಲದಲ್ಲಿ ಆಕೆಯ ಕಣ್ಣಿನಲ್ಲಿ ನೀರೂರಿತು.

"ಎಲ್ಲಿ ಶಾನ್ತೂ–" ಕಾನ್ತಯ್ಯ ಮಗಳ ಕೈ ಹಿಡಿದೆಳೆಯುತ್ತ ಹೇಳಿದ: "ನಡೆ–ಮನೆಗೆ ಹೋಗೋಣ. ಏನೋ ದೇವರು ನಿನ್ನ ಹಣೆಯಲ್ಲಿ ಬರೆದಂತೆ ಆಗುತ್ತೆ. ಅಂತೂ ಈ ನಾಯಿಯ ಮನೆಯಲ್ಲಿರುವುದು ನಾಚುಗೆ–ನಗೆಗೇಡಿ. ನಡೆ–ನಡೆ ಹೊರಡು."

"ಅಪ್ಪಾ ... ನಾನು ಬರುವುದಿಲ್ಲ .ಅಪ್ಪಾ . .ಅಪ್ಪಾ. ....." ಪಾಪ! ಮುಗ್ಧಬಾಲಿಕೆ ಅಳಲು ತೊಡಗಿದಳು.

ಇದನ್ನು ಕಂಡು ಐತಪ್ಪನ ಸಿಟ್ಟು ಚರಮಸೀಮೆಗೇರಿತು. ಸಿಟ್ಟು ಬಂದುದು ಮಾವನ ಮೇಲಾದರೂ ಶಾನ್ತಾಳ ಬೆನ್ನಿಗೆ ಚೆನ್ನಾಗಿ ನಾಲ್ಕು ಏಟು ಏರಿಸಿ ಹೇಳಿದ–"ನೀನು ನನ್ನ ಮನೆಯ ಮಾರಿ. ಕಲಿ ಸ್ವರೂಪ. ನೀನು ಈಗಲೆ ಹೊರಟು ಹೋಗಬೇಕು. ನನ್ನ ಮನೆಗೆ ಕಾಲಿಡಕೂಡದು. ಹೊಲೆಯನ ಮಗಳು ಹೊಲೆಯನ ಮನೆಯಲ್ಲಿಯೆ ಇರಬೇಕು. ನಾಯಿ! ತೊಲಗಿಲ್ಲಿಂದ..........." ಇನ್ನಷ್ಟು ಜೋರಾಗಿ ಹೊಡೆದ.

ಶಾನ್ತಾ ಪತಿಯ ಕಾಲಿಗೆ ಬೀಳುತ್ತ ನುಡಿದಳು: "ನನ್ನ ದೇವರೆ ....... ಯಾವ ತಪ್ಪಿಗಾಗಿ ನನಗೆ ಹೊಡೆಯುತ್ತೀರಿ. ನಾನೇನು ಮಾಡಿದೆ? ನಾನು ನಿಮ್ಮನ್ನು ಅಗಲಿರಲಾರೆ. ನನಗೆ ನೀವೆ ಗತಿ–ಮತಿ–ಪ್ರಾಣ. ನಾನೆಲ್ಲಿಗೂ

ಹೋಗುವುದಿಲ್ಲ. ಅಪ್ಪಾ, ದಮ್ಮಯ್ಯ— ಹೊರಟುಹೋಗಿ." ಹೀಗೆ ಹೇಳಿದ ವಳೆ ಬಿಕ್ಕಿಬಿಕ್ಕಿ ಅತ್ತುಬಿಟ್ಟಳು.

ಈಯೆಲ್ಲ ಗಲಾಟೆಯನ್ನು ಕೇಳಿ ನೆರೆಹೊರೆಯ ನಾಲ್ಕೆಂಟು ಜನರು ಸೇರಿದರು. ಮುದುಕಿ ಅಂಗಳದಲ್ಲಿ ನಿಂತು ಬೊಬ್ಬೆ ಹಾಕಲು ತೊಡಗಿದ್ದಳು. ಬೀರ ಕಂಗಾಲಾಗಿ ಅಳತೊಡಗಿದ್ದ! ಚೆನ್ನಾಗಿ ಕತ್ತಲಾಗಿತ್ತು. ಮೂಡಣ ಬಾಂದಳದಲ್ಲಿ ಆಗ ತಾನೆ ಉದಿಸಿದ ಚಂದ್ರಮ ಈ "ಭೀಷಣ ಸಂಗ್ರಾಮ" ವನ್ನು ಕಾಣಲು ಹೇಸಿ ಮುಖಕ್ಕೆ ಮುಗಿಲಿನ ಪರದೆಯನ್ನೆಳೆದು ಕೊಂಡಿದ್ದ. ಐತಪ್ಪನ ಮನೆಯ ನಾಯಿಯೂ ನೆರೆಮನೆಯ ನಾಯಿಯೂ ಪರಸ್ಪರ ಜಗಳಾಡಿಕೊಳ್ಳುತ್ತ ತಾವೂ ಶಕ್ಯವಿದ್ದಷ್ಟು ಗುಲ್ಲೆಬ್ಬಿಸುತ್ತಲಿದ್ದುವು! ನೆರೆ ಹೊರೆಯ ಜನರು ಬಂದವರಲ್ಲಿ ಒಂದೆರಡು ಜನ ಕಾನ್ತಯ್ಯನ ಪಕ್ಷ ಹಿಡಿದು ಮಾತನಾಡಿದರು. ಒಂದೆರಡು ಜನ ಐತಪ್ಪನ ಪಕ್ಷ ಹಿಡಿದು ವಾದಿಸಿದರು. ಒಂದೆರಡು ಜನ ಮಧ್ಯಸ್ಥಿಕೆ ಮಾಡಲು ಬಂದರು. ಉಳಿದ ವರು ಸುಮ್ಮಗೆ ನೋಡುತ್ತ ನಿಂತರು. ಆದರೆ ಯಾರ ಮಾತೂ ನಡಯ ಲಿಲ್ಲ. ಇಬ್ಬರೂ ಬಾಯ್ತುಂಬ ಬೈದುಕೊಂಡರು. ಇದನ್ನು ಕಂಡು ಶಾನ್ತಾಳ ಹೃದಯದಲ್ಲಿಯೂ ಗಂಡನ ಕುರಿತಾಗಿ ಒಂದು ಬಗೆಯ ಅವಜ್ಞೆ ಮೂಡಿತು.

"ಇಷ್ಟು ಬುದ್ಧಿ ಬೇಡವೆ? ಪಾಪ— ಮಾವ ಬಂದು ದಮ್ಮಯ್ಯ ಹಾಕಿ ದಾಗ ಮನಸ್ಸು ಕರಗದಿದ್ದ ಇವರು ಮನುಷ್ಯರೇ? ನಾಯಲಿ! ನನಗೆ ಹೀಗೆ ಬಡಿಯುತ್ತಾರಲ್ಲಾ— ಯಾವ ಖರ್ಮಕ್ಕಾಗಿ— ನಾನು ತೌರಿಗೆ ಹೋಗಿ ಬಿಡುತ್ತೇನೆ. ಮಣ್ಣು ತಿನ್ನಲಿ! ಆಗ ಬುದ್ಧಿ ಬಂದೀತು" ಎಂಬ ವಿಚಾರ ಲಹರಿಯೆದ್ದು ಶಾನ್ತಾಳ ಹೃದಯದಲ್ಲಿ ಕೋಲಾಹಲವನ್ನುಂಟುಮಾಡಿತು.

ಕಾನ್ತಯ್ಯನ ಸಿಟ್ಟಿಗೂ ತುದಿಮೊದಲಿಲ್ಲವಾಯಿತು. ಮಗಳ ರಟ್ಟೆ ಹಿಡಿ ದೆಳೆದುಕೊಂಡು ಮನೆಯ ಹಾದಿ ಹಿಡಿದುಬಿಟ್ಟ.

"ಮಗಳ್ನ ಮೆರೆಯಿಸಲಿಕ್ಕೆ ಕೊಂಡುಹೋಗ್ತಾನೆ. ಮಾರಾಟಕ್ಕೆ ತೊಡಗಿದ್ರೆ ಸಾಲ ಸಂದಾಯವಾದೀತು" ಮುದುಕಿ ಕಿರುಚಿಕೊಂಡಿತು.

"ಹೋಗಲವ್ಮ. ನನ್ನ ಮನೆಯ ಆಪತ್ತು ತೊಲಗಿತು. ಅಲ್ಪರ ಸಹವಾಸ ಎಂದಿಗೂ ಒಳ್ಳೆಯದಲ್ಲ. ಆ ರಂ..... ನನ್ನ ಮನೆಗಿನ್ನು ಕಾಲಿಡಕೂಡದು" ಎಂದು ಐತಪ್ಪ ಕನಲಿ ಕೂಗಿದ.

"ಕಾನ್ತಯ್ಯ, ನಾವೇನು ಇನ್ನು ಬರುವ ಹಾಗಿಲ್ಲ. ನಮ್ಮ ಹುಡುಗ ಬೇರೆ ಲಗ್ನವಾಗ್ತಾನೆ. .. ಜಾಗ್ರತೆ. ." ಎಂದು ಪುನಃ ಮುದುಕಿ ಕೂಗಿತು. ಒಂದಕ್ಕೂ ಉತ್ತರ ಕೊಡದೆ ಕಾನ್ತಯ್ಯ ನಡೆದುಬಿಟ್ಟ. ಶಾನ್ತಾ ಒಮ್ಮೆ ವೇಗವಾಗಿ ತಂದೆಯ ಬೆನ್ನು ಹಿಡಿಯುವಳು. ಹಿಂತಿರುಗಲೇ ಎಂದು ಒಮ್ಮೆ ನಿಧಾನವಾಗಿ ನಡೆಯುವಳು. ಕೊನಗೆ ಅಪ್ರತಿಭಳಾಗಿ ತೌರಿಗೆ ಬಂದಳು.

* * * *

ಒಂದು ದಿವಸ ನಾಲ್ಕು ಮಂದಿಯೊಡನೆ ಕೂಡಿಕೊಂಡು ಐತಪ್ಪ ಇಸ್ಪೀಟ್ ಆಟದಲ್ಲಿ ತೊಡಗಿದ್ದ ಹೊರಗಿನಿಂದ ಅಂಚೆಯ ಆಳು ಬಂದು ಕೂಗಿದ. ಐತಪ್ಪ ಹೊರಗೆ ಬಂದು— "ಏನಯ್ಯಾ" ಎಂದು ಕೇಳಿದ.

"ಒಂದು ರಿಜಿಸ್ಟ್ರಿ ಕಾರ್ಡು ಉಂಟು" ಎಂದ ಪೇದೆ.

"ಯಾರದಯ್ಯಾ?"

"ವಕೀಲ್ ಕೃಷ್ಣಯ್ಯನವರದ್ದು."

ಐತಪ್ಪನು ಆಶ್ಚರ್ಯದಿಂದ "ಎಲ! ಇದೇನು ಬಂತು ಬೇತಾಳನ ಕಾಟ"ವೆಂದು ಕೊಂಡು ಸಹಿ ಹಾಕಿ ಕಾಗದ ತೆಗೆದುಕೊಂಡು ಓದಿದ:—

'ಕೊಡಂಕೂರು ಸೂರಣ್ಣನವರ ಮಗ ಐತಪ್ಪನವರಿಗೆ— ನೀವು ನಮ್ಮ ಕಕ್ಷಿಗಾರ ಕಾನ್ತಯ್ಯನವರ ಮಗಳು ಶಾನ್ತಾ ಎಂಬ ಹುಡುಗಿಯನ್ನು ಎರಡು ವರ್ಷಗಳ ಹಿಂದೆ ಮದುವೆಯಾದುದು ಸರಿಯಷ್ಟೆ. ಮದುವೆಯ ಕಾಲದಲ್ಲಿ ಮಾಡಿಸಿ ಹಾಕಿದ ಬಂಗಾರಗಳನ್ನೆಲ್ಲ ಮಾರಿದ್ದಲ್ಲದೆ ನಿತ್ಯವೂ ಹುಡುಗಿಯನ್ನು ಕಂಡಾಬಟ್ಟೆ ಹಿಂಸಿಸುತ್ತೀರೆಂತಲೂ, ಈಗ ಹುಡುಗಿಯನ್ನು ಅವಳ ತಂದೆಯ ಜತೆಯಲ್ಲಿ ಮನೆಗೆ ಕಳುಹಿಸಿಬಿಟ್ಟಿದ್ದೀರೆಂತಲೂ ನಮ್ಮ ಕಕ್ಷಿಗಾರರು ಬೇಕಾದ ಪುರಾವೆಗಳಿಂದ ಸಿದ್ಧಪಡಿಸುತ್ತಾರೆ. ಈ

ನೋಟೀಸು ತಲ್ಪಿದ ಮೂರು ದಿವಸಗಳ ಒಳಗೆ ನಾಲ್ಕುಜನ ಸದ್ಗೃಹಸ್ಥರ ಸಮಕ್ಷಮ ಒಂದು ಬಾಂಡ್ ಬರೆದುಕೊಟ್ಟು ಹುಡುಗಿಯನ್ನು ಕರೆದು ಕೊಂಡು ಹೋದರೆ ನೆಟ್ಟಗಾಯಿತು. ಇಲ್ಲವಾದರೆ ನ್ಯಾಯಾಸನದಲ್ಲಿ ಹುಡುಗಿಯ ಅಶನಾರ್ಥಕ್ಕೆ ಕಾಯಿದೆ ರೀತ್ಯಾ ದಾವಾ ಮಾಡುವುದರಲ್ಲಿ ಬಂದೀತು ಎಂಬುದನ್ನು ತಿಳಿದಿರುವುದು.

ಪಿ. ಕೆ. ಕೃಷ್ಣಯ್ಯ, ವಕೀಲ್.'

ನೋಟೀಸನ್ನು ಹಲವು ಬಾರಿಯೋದಿ ನೋಡಿದ. ತನ್ನ ಸಂಗಾತಿ ಗಳಿಗೂ ಓದಿ ತೋರಿಸಿದ. ಅವರು ಒಬ್ಬೊಬ್ಬರು ಒಂದೊಂದು ಬಗೆಯ ಉಪಾಯಗಳನ್ನು ಹೇಳಿದರು. ಕೊನೆಗೊಂದು ದಿವಸ ತಾನೂ ವಕೀಲ್ ಉಮೇಶರಾಯರಲ್ಲಿಗೆ ತೆರಳಿ "ರೂಪಾಯಿ ಕೊಡದಿದ್ದುದಕ್ಕೆ ನೀನು ದ್ವೇಷ ಸಾಧಿಸಲು ಹೊರಟಿರುವೆ; ಅದಕ್ಕೆ ನಾನು ಹೊಣೆಯಲ್ಲ"ವೆಂದು ಅರ್ಥ ಬರುವಂತೆ ಉತ್ತರವೊಂದನ್ನು ಕಳುಹಿಸಿ ಬಿಟ್ಟ.

* * * *

ಐತಪ್ಪನ ಕಹಿಯಾದ ಉತ್ತರವನ್ನು ನೋಡಿ ದಾವೆಮಾಡುವುದೆ 'ಸೈ' ಎಂದು ಕಾನ್ತಯ್ಯ ನಿರ್ಧರಿಸಿಬಿಟ್ಟ. ಇಂತಹುದಕ್ಕೆಲ್ಲ ಅವನಿಗೆ ಯಾರಾದರೂ ಕಾಯಿದೆ-ಕಾನೂನು ಕಲಿಸಬೇಕಾದ್ದಿಲ್ಲ. ಮಗಳ ಸರ ವೊಂದನ್ನೆ ರಂಗರಾಯರಲ್ಲಿ ಒತ್ತೆಯಾಗಿಟ್ಟು ಹಣ ಪಡೆದುಕೊಂಡು— ಒಳ್ಳೆಯ ದರ್ಪದಿಂದಲೆ ಉಡುಪಿ ಕೋರ್ಟಿನಲ್ಲಿ ದಾವೆ ದಾಖಲುಮಾಡಿದ.

ಕಾನ್ತಯ್ಯ ಮಗಳಿಗೆ ವಿಧವಿಧವಾಗಿ ಬೋಧಿಸಿದ. ವಕೀಲರು ಏನೆಲ್ಲ ಕೇಳಬಹುದೋ ಆ ಪ್ರಶ್ನೆಗಳಿಗೆಲ್ಲ ಉತ್ತರ ಕಲಿಸಿ ಚೆನ್ನಾಗಿ ತರ ಬೇತಿ ಮಾಡಿದ: "ಮಗೂ, ಕೋರ್ಟಿನಲ್ಲಿ ನನ್ನ ಮರ್ಯಾದೆ ತೆಗೆಯ ಬೇಡ. ನಿನ್ನನ್ನು ಚೆನ್ನಾಗಿ ಕಾಣುತ್ತಿದ್ದಿಲ್ಲವೆಂದೂ, ನಿತ್ಯವೂ ಹೊಡೆಯುತ್ತಿದ್ದ ನೆಂದೂ, ಆ ಹಿಂಸೆಯನ್ನು ಸಹಿಸುವುದಕ್ಕಾಗುವುದಿಲ್ಲವೆಂದೂ, ನಗ ನಾಣ್ಯ ಗಳನ್ನೆಲ್ಲ ಮಾರಿ ದುಡ್ಡು ಸಂಗ್ರಹಿಸಿದ್ದಾನೆಂದೂ, ನಿನ್ನನ್ನೀಗ ದಿಕ್ಕಿಲ್ಲದಂತೆ ಮಾಡಿದ್ದಾನೆಂದೂ ಹೇಳಿಕೆ ಕೊಡಬೇಕು" ಎಂದು ಚೆನ್ನಾಗಿ ಹೇಳಿಕೊಟ್ಟ.

ಶಾನ್ತಾ ನಿಜವಾಗಿಯೂ ಉಭಯ ಸಂಕಟದಲ್ಲಿ ಬಿದ್ದಳು. ಹದಿನಾಲ್ಕು ವರ್ಷ ಮಮತೆಯಿಂದ ಸಾಕಿದ ಪ್ರೀತಿಯ ತಂದೆಯ ಮಾತನ್ನು ಅವಳು ಮೀರುವುದು ಶಕ್ಯವೆ ಇಲ್ಲ. ಆದರೆ ಎರಡು ವರ್ಷ ಕಾಲ ಪ್ರೇಮದ ನಂದನವನದಲ್ಲಿ—ರಸಸರಿತ್ತಿನಲ್ಲಿ—ಸೊಗವನ್ನುಣ್ಣಿಸಿದ ಗಂಡನ ಕೊರಳು ಕೊಯ್ಯುವುದೇ? ಅದೂ ಶಕ್ಯವಿಲ್ಲ. ಇಬ್ಬರಲ್ಲಿ ಯಾರ ಪಕ್ಷವನ್ನು ಹಿಡಿಯಬೇಕು ಎಂಬ ಜ್ಞಾನ ಆ ಪಶುವಿಗೆಲ್ಲಿಂದ? ತನ್ನ ತಂದೆಗೆ ದುಡ್ಡು ಕೊಡದಿದ್ದುದೂ, ತನ್ನನ್ನು ಅಕಾರಣವಾಗಿ ಹೊಡೆದುದೂ ಆಕೆಯ ದೃಷ್ಟಿಯಲ್ಲಿ ದೊಡ್ಡ ತಪ್ಪಾಗಿತ್ತು. ಎಂತಲೆ "ಕಾನ್ತಯ್ಯನ ಕೈಯೆತ್ತುವುದೆ ಧರ್ಮ"ವೆಂದು ದೃಢವಾಗಿ ಭಾವಿಸಿದಳು.

* * * *

ವಿಚಾರಣೆಯ ದಿನ ಸಮೀಪಿಸಿದಂತೆಲ್ಲ ಶಾನ್ತಾಳ ಮನಸ್ಸು ಉದ್ವಿಗ್ನವಾಗಹತ್ತಿತು.

ಮನಸ್ಸಿನ ತಳಮಳವನ್ನು ತಾಳಿಕೊಳ್ಳಲಾರದೆ ಹೋಗಿ ಮಲಗಿಕೊಂಡಳು. ಕಣ್ಣಿಗೆ ಕಣ್ಣು ಹತ್ತಲೊಲ್ಲದು. ಅತೀತ ಸ್ಮೃತಿಗಳೆಲ್ಲ ಅಂತಃಪಟದಲ್ಲಿ ಮೂಡಿ ಶಾನ್ತಾಳ ಶಾನ್ತಹೃದಯದಲ್ಲಿಯೂ ಬೃಹತ್ತಾದ ಕ್ಷೋಭೆಯನ್ನುಂಟುಮಾಡಿದುವು! ಕಣ್ಣುಮುಚ್ಚಿ ಮಲಗಿದಳು. ಆದರೂ ದೀನವದನನಾಗಿ ಐತಪ್ಪ ಹತ್ತಿರವೆ ಕುಳಿತುಕೊಂಡು "ಯಾಕೆ ಶಾನ್ತಾ ನಾನು ಹತ್ತಿರ ಕುಳಿತಿದ್ದರೆ ನಿನಗೆ ದುಃಖವಾಗುವುದೆ?" ಎಂದು ಕೇಳಿದಂತಾಯಿತು. "ಶಾನ್ತಾ ನೀನು ನನ್ನ ಜೀವ"ವೆಂದು ನುಡಿದು ಗಲ್ಲ ಸವರಿದಂತಾಯಿತು.

* * * *

ಈ ತೊಂದರೆಯಿಂದ ಪಾರಾಗುವಂತೆ ಪ್ರಾರ್ಥಿಸಬೇಕೆಂದು ಆಕೆ ನೇರವಾಗಿ ಉಡುಪಿಯ ಶ್ರೀ ಕೃಷ್ಣಗುಡಿಗೆ ಹೋಗಿ ಬರೋಣವೆಂದು ಹೊರಟಳು. ಹಾಗೆ ಹೋಗುವಾಗ ಐತಪ್ಪನ ಮನೆಯ ಹತ್ತಿರವೆ ಹೋಗಬೇಕು. ಮುಖ ತಗ್ಗಿಸಿಕೊಂಡು ವೇಗವಾಗಿ ನಡೆದುಬರುತ್ತಿದ್ದಳು. ದಾರಿ

ಯಲ್ಲಿಯೆ ಸೇತೂವಿನ ಮೈ ತಿಕ್ಕುತ್ತ ಐತಪ್ಪ ನಿಂತಿದ್ದ. ಶಾನ್ತಾಳಿಗೆ ಹೆದರಿಕೆ ಯಾಯಿತು. ಮಾತನಾಡಲೆ ಕೂಡದು ಎಂದು ನಿರ್ಧರಿಸಿಕೊಂಡು ಮೆಲ್ಲನೆ ಮುಂದುವರಿದಳು. "ಶಾನ್ತಾ!" ಎಂದು ಐತಪ್ಪನೆ ಕರೆದ. ಆ ಮಾತಿನ ದನಿಯಲ್ಲಿ ಅನುರಾಗ ತುಂಬಿತ್ತು.

"ಹೂಂ" ಎಂದಳು ಶಾನ್ತಾ ಕ್ಷಣ ಹೊತ್ತು ನಿತ್ತು.

"ಸ್ವಲ್ಪ ಮಾತನಾಡಿ ಹೋಗೆ!"

"ಆಗಲಿ"

ಇಬ್ಬರೂ ತುಸುಹೊತ್ತು ಮಾತನಾಡುತ್ತ ಆ ತೋರಿಯ ಹತ್ತಿರಕ್ಕೆ ಬಂದರು. ಇವರ ಹಿಂದೆಯೆ ಸೇತೂ ಬರುತ್ತಿತ್ತು.

"ನನಗೀಗ ಬಹಳ ಕಷ್ಟ ಶಾನ್ತಾ"

ಶಾನ್ತಾಳ ಕಂಗಳಲ್ಲಿ ನೀರಿನ ಕಟ್ಟೆಯೊಡೆಯಿತು! "ನೀನಿರುವಾಗ ಮನೆಯಲ್ಲಿ ಬೆಳಕಿತ್ತು. ಆಮೇಲೇಕೋ ಬಹಳ ಬೇಜಾರ ಶಾನ್ತಾ!"

"... ....... . ..... .. . . "

"ಶಾನ್ತಾ! ನೀನು ಎಷ್ಟು ಒಳ್ಳೆಯ ಹುಡುಗಿ! ಏನೋ ನಿನ್ನ ತಂದೆಯ ಮರ್ಜಿಯಿಂದ ಹೀಗಾಯ್ತು. ಆದರೂ ಶಾನ್ತಾ! ನಿನ್ನನ್ನು ನನ್ನಷ್ಟು ಪ್ರೀತಿಸುವವರು ಬೇರೆ ಯಾರಿದ್ದಾರೆ? ನೀನು ಹೋದವಳು ತಿರುಗಿ ಯಾಕೆ ಬಂದಿಲ್ಲ ಶಾನ್ತಾ? ನನ್ನನ್ನು ಮರೆತುಬಿಟ್ಟೆಯಾ?"

ಶಾನ್ತಾ ಗಳಗಳನೆ ಅತ್ತುಬಿಟ್ಟಳು!

"ಶಾನ್ತಾ"

"...... ..... .. ......."

"ನೀನೂ ನನ್ನನ್ನು ಪ್ರೀತಿಸುತ್ತೀಯಾ?"

"ಹೌದು!"

"ನನ್ನ ಮುದ್ದು ಶಾನ್ತಾ! ನಾಳೆ ನನ್ನ ಮರ್ಯಾದೆ ತೆಗೆಯು ತ್ತೀಯಾ?"

"... ....... . . ."

"ನನ್ನ ಸರ್ವಸ್ವ—ನಾಳೆ ನೀನು ನನ್ನ ಮರ್ಯಾದೆ ತೆಗೆದರೆ ಇದೋ ಈ ಬಾವಿಗೆ ಹಾರಿಕೊಳ್ಳಬೇಕಾಗುತ್ತದೆ ನಾನು."

ಶಾನ್ತಾ ಬಾವಿಯನ್ನು ಇಣಿಕಿದಳು. ಬಾಯಿದೆರೆದು ಕವಳಿಸಲು ಸಜ್ಜಾಗಿ ನಿಂತ ಕಾಲಪುರುಷನ ಬಾಯಿಯಂತೆ ಕಂಡಿತಾಕೆಗೆ. ಹೆದರಿ ಹೇಳಿದಳು. "ಇಲ್ಲ. ನಾಳೆ ನಿಮ್ಮ ಮರ್ಯಾದೆ ತೆಗೆಯುವುದಿಲ್ಲ."

ಐತಪ್ಪ ಹಿರಿಹಿರಿ ಹಿಗ್ಗಿದ. ಆಕೆಯನ್ನು ಎರಡೂ ಕಯ್ಗಳಿಂದಪ್ಪಿ ಒಂದು ಅಮರವಾದ ಮುತ್ತಿನ ಮುದ್ರೆಯನ್ನೊತ್ತಿಬಿಟ್ಟ!

"ನಾನು ಎಂದೆಂದಿಗೂ ನಿಮ್ಮವಳೆ" ಎಂದಳು ನಗುನಗುತ್ತ ಶಾನ್ತಾ. ಇಷ್ಟರಲ್ಲಿ ಕತ್ತಲಾಯಿತು. ಗುಡಿಗೆ ಹೋಗದೆಯೆ ಮನೆಗೆ ಮರಳಲು ಬಯಸಿದಳು ಶಾನ್ತಾ.

"ಯಾಕೆ ಮನೆಗೆ ಹೋಗುತ್ತೀಯೆ? ಇಲ್ಲೆ ಇದ್ದುಬಿಡು."

ಶಾನ್ತಾಳಿಗೆ ಹೌದೆನಿಸಿತು. ಮನೆಗೆ ಹೋಗೋದಿಲ್ಲವೆಂದು ನಿಶ್ಚಯಿಸಿ ಕೊಂಡು "ನನ್ನ ದೇವರೆ, ನಿಮ್ಮ ಇಚ್ಛೆಯಿದ್ದಂತಾಗಲಿ" ಎಂದಳು. ಮನೆ ಯಲ್ಲಿ ಇಷ್ಟು ಸುಖ ಸಿಗುವುದೆ?

* * * *

ನಾಯಿಯ ಕೂಗಿನಿಂದಾಗಿ ನಿದ್ರಾಭಂಗವಾಯಿತು. ಶಾನ್ತಾ ಎಚ್ಚತ್ತು ನೋಡುತ್ತಾಳೆ. ತಂದೆಯ ಮನೆಯಲ್ಲಿಯೆ ಹಾಸಿಗೆಯಲ್ಲಿ ಮಲಗಿದಾಳೆ! ಬೆಚ್ಚಿಬಿದ್ದು ಸುತ್ತಲೂ ನೋಡಿದಳು. ಹೌದು! ತಂದೆಯದೆ ಮನೆ! ಹಾಗಾ ದರೆ ಆಕೆ ಐತಪ್ಪನೊಡನೆ ಮಾತನಾಡಿದುದು ಕನಸಿನಲ್ಲಿಯೆ?

* * * *

ಸರಿ; ಬೆಳಗಾಯಿತು. ಜತೆಗೆ ಶಾನ್ತಾಳ ಹೃದಯದ ಕೋಲಾಹಲವೂ ಹೆಚ್ಚಾಯಿತು. ಐತಪ್ಪನ ನೆನಪಾದಾಗಲೆಲ್ಲ ಅನುರಾಗವುಕ್ಕಿ ಕಣ್ಣಿನಲ್ಲಿ

ನೀರು ತುಂಬುವುದು. ತಲೆ ತಿರುಗಿ ಕೈಕಾಲುಗಳು ನಡುಗತೊಡಗುವುವು. ತಾಯಿ ತಂದೆಗಳೇನೋ ಧೈರ್ಯದಿಂದ ಕ್ಷಣಕ್ಷಣಕ್ಕೂ ಆಕೆಯನ್ನು ಹುರಿದುಂಬಿಸಿ ತರಬೇತಿ ಮಾಡುತ್ತಿದ್ದಾರೆ!

ಮಧ್ಯಾಹ್ನ ಲಗುಬಗೆಯಿಂದ ಊಟವನ್ನು ತೀರಿಸಿ ಕಾಂತಯ್ಯ ಮಗಳ ಕೂಡೆ ಕೋರ್ಟಿಗೆ ತೆರಳಿದ. ಕಾಂತಯ್ಯ ಒಳ್ಳೆಯ ಭರ್ಜರಿಯಿಂದಲೆ ತೆರಳಿದ್ದ. ಬಿಳಿದಾದ ಪಂಚೆ — ಕೋಟು — ತಲೆಗೆ ಮೂವತ್ತು ಮೊಳದ ಮುಂಡಾಸು — ಒಟ್ಟಾರೆ ರೀವಿಯಿಂದಲೆ ಬಂದಿದ್ದ. ಶಾಂತಾಳ ಮುಖ ಬಾಡಿದ ಮಲ್ಲಿಗೆಯ ಮೊಗ್ಗಿನಂತೆ — ಕಳೆಗುಂದಿ ಕಾಣುತಿದ್ದಿತು. ಶಾಂತಾ ಕೋರ್ಟಿಗೆ ಬರುವಾಗ "ಕಾಯುವ ಕೋಣೆ"ಯಲ್ಲಿ ಐತಪ್ಪ ಕುಳಿತಿದ್ದ. ಅವನನ್ನು ಕಂಡೊಡನೆಯೆ ಶಾಂತಾ ಅಧೀರೆಯಾದಳು. ಒಮ್ಮೆ ಆ ಕಡೆ ನೋಡಿಯೆ ನೋಡಿದಳು. ಆತನ ಕಣ್ಣಿನಲ್ಲಿ ಸ್ನೇಹ ಹೊಳೆಯಾಗಿ ಹರಿಯುತ್ತಿತ್ತು. ಹೃದಯ ಈಕಗಾಗಿ ಪರಿತಾಪಬಡುತ್ತಿದೆಯೆಂಬ ಗುಟ್ಟನ್ನು ತಿಳಿಸುತ್ತಲಿದ್ದುವು ಆ ಕಣ್ಣುಗಳು. ಎದೆಯ ಒಳಗಿನ ಪ್ರೇಮ ತುಟಿಗಳ ಸಂದಿನಲ್ಲಿ ಬಂದು ಶಾಂತಾಳನ್ನು ಇಣುಕುತಲಿತ್ತು.

ಐತಪ್ಪ ಹೆಂಡತಿಯನ್ನು ಕಂಡೊಡನೆ ಗಲಿಬಿಲಿಯಲ್ಲಿ ಬಿದ್ದ. ಒಂದು ಬಗೆಯ ಜಡನಾಗಿ ಹೋದ. ಪುನಃ ಧೈರ್ಯ ತಂದುಕೊಂಡು ಕುಳಿತ. ಆದರೂ ಒಳಗಿನ ಜೀವ ಹಾಡತೊಡಗಿತು: "ನನ್ನ ಶಾಂತಾ—ನನ್ನ ಶಾಂತಾ!"

ಕೋರ್ಟಿನಲ್ಲಿಯೂ ಭಾರೀ ಗದ್ದಲ. ಕೊಡವೂರಿನ—ಕೊಡಂಕೂರಿನ ಬಲುಮಂದಿ ನೆರೆದಿದ್ದರು. ಎಲ್ಲರಿಗೂ ಕುತೂಹಲಕಾರಿಯಾಗಿ ನಿಂತಿತ್ತು ಕಾಂತಯ್ಯನ ಕೇಸು!

ಮೊದಲಾಗಿ ಕಾಂತಯ್ಯನ ಹೇಳಿಕೆ ಮುಗಿಯಿತು. ಆ ಬಳಿಕ ಶಾಂತಾಳ ಹೇಳಿಕೆ. ಶಾಂತಾ ಸಾಕ್ಷಿಗೂಡನ್ನು ಹತ್ತುವಾಗಲೆ ಹೆದರುತ್ತ — ನಡುಗುತ್ತ— ನ್ಯಾಯಾಸನದ ಮೇಲೆ ಮಂಡಿಸಿರುವ "ಧರ್ಮಾವತಾರ ಪುರುಷ"ರನ್ನು ನೋಡಿದಳು. ಕೋರ್ಟಿನಲ್ಲಿ ಕುಳಿತಿದ್ದ ಎಲ್ಲ ಜನರೂ ಕಿವಿ ನಿಮಿರಿಸಿ ಶಾಂತಾಳ ಕಡೆಗೆ ದೃಷ್ಟಿಕ್ಷೇಪ ಮಾಡಿದರು. ಕಾಂತಯ್ಯನ ಎದೆ ಧಪಧಪ

ಎಂದು ಬಡಿದುಕೊಳ್ಳುತ್ತಿತ್ತು. ಮಗಳ ಮೇಲಿನ ನಂಬಿಗೆ ಸ್ವಲ್ಪ ಧೈರ್ಯವನ್ನೂ ತಂದುಕೊಟ್ಟಿತ್ತು.

ಆದರೆ.........................?

ಸ್ವಸ್ತಿವಾಚನದ ವಿಧಿ ಮುಗಿದ ತರುವಾಯ ಶಾನ್ತಾ ತನ್ನ ಹೇಳಿಕೆಯಲ್ಲಿ ಹೇಳಿದ್ದು ಇಷ್ಟೆ!

"ನನ್ನ ತಂದೆಯವರು ಹೇಳುವುದೆಲ್ಲ ಸುಳ್ಳು! ಅವರು — ನನ್ನ ಪತಿಗಳು — ಬಹಳ ಒಳ್ಳೆಯವರು. ಅವರು ನನಗೆ ಹೊಡೆಯಲೇ ಇಲ್ಲ. ಅವರಂತಹ ಸಾಧು ಸಜ್ಜನರು ಸಿಗುವುದೇ ಅಪೂರ್ವ. ಅವರು ನನ್ನ ದೇವರು. ಅವರೆ ನನಗೆ ಎಲ್ಲ ಕಾಲಕ್ಕೂ ಬೇಕಾದವರು!"

ಮೂವತ್ತು ಮಳ ಉದ್ದದ ಮುಂಡಾಸನ್ನು ತಲೆಯಲ್ಲಿ ಬಲವಾಗಿ ಸುತ್ತಿರದಿದ್ದರೆ ಕಾನ್ತಯ್ಯನ ತಲೆ ಸಿಡಿದು ಹೋಗುತ್ತಿತ್ತೋ ಏನೋ!



# ಕೊನೆಯ ಗುರಿ

## ಶ್ರೀ ವಿ. ಉಪೇಂದ್ರ ಕಾಮತ್

*

ಇವರು 'ಉಪೇಂದ್ರ' ಎಂಬ ಗುಪ್ತ ಕಾವ್ಯನಾಮದಿಂದ ಅನೇಕ ಕತೆ—ನಾಟ್ಯಛಟಾಗಳನ್ನು ಬರೆದಿದ್ದಾರೆ. ಇವರ ಹೆಚ್ಚಿನ ಲೇಖನಗಳು 'ಧುರೀಣ'ನಲ್ಲಿ ಅಚ್ಚಾಗಿವೆ. ಜೀವನದ ಸಿಹಿ—ಕಹಿಗಳನ್ನು ಇದ್ದದನ್ನು ಇದ್ದಂತೆಯೆ ಅರ್ಥಮಾಡಿಕೊಂಡು ಕತೆಗಳಲ್ಲಿ ಕಾಣಿಸುವ ಜಾಣ್ಮೆ ಇವರಿಗೆ ಇದೆ. ಅನುಭವ ವ್ಯವಸಾಯಗಳಿಂದ ಇನ್ನೂ ಒಳ್ಳೆಯ ಬರೆಹಗಳು ಇವರ ಲೇಖನಿಯಿಂದ ಬರಲಿಕ್ಕಿವೆಯೆನ್ನಲು ಅವಕಾಶವಿದೆ.

ಅವನ ಮುಖಭಂಗಿಯು ಉದ್ವಿಗ್ನವಾಗಿತ್ತು. ಎದೆಯು ಬೇಗೆ ಕಣ್ಣುಗಳಲ್ಲಿ ಮೂಡಿ ಕಾಣುತ್ತಿತ್ತು! ಕೂದಲೆಲ್ಲ ಕೆದರಿ ಹೋಗಿ ಅಲ್ಲಲ್ಲಿ ಬತ್ತಿ ಕಟ್ಟಿಕೊಂಡಿತ್ತು. ಸಿಟ್ಟಿನ ಭರಕ್ಕೆ ಹುಬ್ಬುಗಳೂ ಕುಣಿಯುತ್ತಿದ್ದುವು. ಮೂಗು ಹೆಡೆಯುರಳಿಸಿದ ಸರ್ಪದಂತಾಗಿ ಬುಸುಗುಟ್ಟುತ್ತಿತ್ತು. ಹೋರಾಟಕ್ಕೆ ಹೆಜ್ಜೆ ಹಾಕುವ ವೀರ ಯೋಧನಂತೆ ಅಗಲವಾದ ಹೆಜ್ಜೆಗಳನ್ನಿಡುತ್ತ ತಲೆಯಲ್ಲಿ ಮೂಡುವ ಭಾವಕ್ಕನುಗುಣವಾಗಿ ಕೈಗಳನ್ನು ತಿರುವುತ್ತ, ಬೀಸುತ್ತ, ನಡುನಡುವೆ ಏನೇನನ್ನೊ ಗುಣುಗುಟ್ಟುತ್ತ ಮುನ್ನಡೆಯುತ್ತಿದ್ದ.

ತಾನು ತನ್ನದು ತನ್ನವರೆಂಬುವವರು ಅವನಿಗೆ ಯಾರೂ ಇದ್ದಿಲ್ಲ. ಅವನು ಹೆಚ್ಚಿನ ವಿದ್ಯಾವಂತನೂ ಅಲ್ಲ. ಅವನಿಗೆ ಜಗತ್ತೊಂದಾಗಿತ್ತು—ಜಗತ್ತಿಗೆ ಅವನೊಬ್ಬನಾಗಿದ್ದ. ಮಾಡಲು ವೃತ್ತಿ ದೊರಕುತ್ತಿದ್ದಿಲ್ಲ—ತಿನಲು ಕೂಳಿಗೂ ಗತಿಯಿದ್ದಿಲ್ಲ.

ಅವನಿಂದು ಪ್ರತೀಕಾರಕ್ಕಾಗಿ ಹೊರಟಿದ್ದಾನೆ. ಜಗತ್ತು ಅವನ ಪಾಲಿಗೆ ನಿಸ್ಸಾರವಾಗಿ ಕಾಣುತ್ತಿದೆ. ಜಗತ್ತಿನಿಂದ ಅವನು ದೂರವಾಗಿರ ಬಯಸುತ್ತಾನೆ. ಸೃಷ್ಟಿಯಲ್ಲಿ ಅವನಿಗೆ ಬೇಕಾಗುವ ವಸ್ತುವೇ ಇಲ್ಲವಾಗಿದೆ. ಮನೆ-ಮಠ-ಮಠ-ಮಾರುಗಳೆಲ್ಲ ಇದ್ದೂ ಅವನ ಪಾಲಿಗೆ ಇಲ್ಲದಂತಾಗಿವೆ. ಜಗತ್ತಿನ ತುಂಬೆಲ್ಲ ಅವನ ಕಣ್ಣು ಶೂನ್ಯವನ್ನೇ ಕಾಣುತ್ತಿದೆ! ಜಗತ್ತು ಅವನ ಪಾಲಿಗೆ ಸ್ವಾರ್ಥಮಯವಾಗಿದೆ. ಅದರ ಮೇಲವನು ನಿಸ್ವಾರ್ಥ ಬುದ್ಧಿಯಿಂದ ನಡೆಯಹತ್ತಿದ. ಆದರೂ ಅದು ಅವನಿಗೆ ಪ್ರತಿಕೂಲವನ್ನೇ ಮಾಡಿತು. ಆಗ ಅವನು ರೊಚ್ಚಿಗೆದ್ದ — ಪ್ರತೀಕಾರಕ್ಕಾಗಿ

ಹಾತೊರೆದು ಮನಸ್ಸು ತೋರಿಸಿದಂತೆ ನಡೆಯಹತ್ತಿದ. ಗುಣುಗುಟ್ಟುತ್ತ ಅವುಡು ಕಚ್ಚಿ ಹುಚ್ಚನಂತೆ ಮುನ್ನಡೆಯುತ್ತಿದ್ದ.

ಅವನ ಧೋತರವೆಲ್ಲ ಧೂಳಿಯಿಂದ ಮಾಸಿಹೋಗಿತ್ತು. ಅಲ್ಲಲ್ಲಿ ಹರಿದೂ ಹೋಗಿತ್ತು! ಅಂಗಿ ಅದಕ್ಕಿಂತ ವಿಕೃತಾವಸ್ಥೆ ಪಡೆದಿತ್ತು. ಹೆಗಲ ಮೇಲೊಂದು ಹರಕು ಪಂಚೆ ಹಾಕಿಕೊಂಡು ಬಿರಬಿರನೇ ನಡೆಯಹತ್ತಿದ ನೆಂದರೆ ಹಿಂದಿರುವ ಮುಂದಿರುವ ಅಕ್ಕಪಕ್ಕದಲ್ಲಿರುವವರ ಅರಿವೇ ಅವ ನಲ್ಲುಳಿಯುತ್ತಿದ್ದಿಲ್ಲ. ಕೆಲವರು ಹುಚ್ಚನೆನ್ನುತ್ತಿದ್ದರು. ಕೆಲವರು ಹೊಟ್ಟೆ ಗಿಲ್ಲದೇ ಹಾಗಾದುದೆನ್ನುವರು. ಯಾರು ಏನೇ ಹೇಳಲಿ—ಹೇಳುತ್ತಿರಲಿ— ಅವನಿಗದರ ಗಣ್ಯವೇ ಇದ್ದಿಲ್ಲ. ಅಂದಿನಿಂದ ಇಂದಿಗೂ ಇದ್ದಂತೆಯೇ ಇದ್ದಾನೆ. ಯಾರೊಡನೆಯೂ ಹುಚ್ಚಾಟವಿಲ್ಲ. ಯಾರೊಡನೆಯೂ ಹೆಚ್ಚಿನ ಮಾತುಕತೆ ಗಳಿಲ್ಲ. ಮೂಡದ ಕೀಳು ಕೆಲಸವಿಲ್ಲ. ಕೂಲಿ ಮಾಡಲೂ ಅವನೆದೆ ಹಿಂಜರಿಯ ಲಿಲ್ಲ. ಹೆರವರ ಮನೆಯ ಕಸಗುಡಿಸಲೂ ಅಳುಕಲಿಲ್ಲ. ಸಿಕ್ಕಂತೆ ಬೈಗಳನ್ನು ಕೇಳಿಯೂ ತುಟಿಯೆತ್ತಲಿಲ್ಲ. ಕೂಲಿಮಾಡುವಲ್ಲಿ ಅಲ್ಲಿನ ಕೂಲಿಗಳಿಂದ ಮೈಮುರಿಯೆ ಏಟು ತಿಂದೂ ಕೈ ಎತ್ತಲಿಲ್ಲ—ಹೀಗಿದ್ದರೂ ಅವನ ಜೀವ ಮಾನದ ಒಂದೇ ಒಂದು ದಿನದಲ್ಲಾದರೂ ತೃಪ್ತಿಯಾಗಿ ಉಂಡು ತೇಗಲಿಲ್ಲ.

ಆ ದಿನ ಸಂಜೆಗೆ ನಾಲ್ಕನೇಯ ದಿನವಾಗಿತ್ತು. ಅವನ ಹೊಟ್ಟೆಗೆ ಒಂದೇ ಒಂದು ತುಂಡು ರೊಟ್ಟಿ ಬಿದ್ದಿರಲಿಲ್ಲ. ಹಸಿವಿನಿಂದ ಕಂಗಾಲಾಗಿದ್ದ. ಕೋಪದಿಂದ ಕಿಡಿಕಿಡಿಯಾಗಿದ್ದ. ಎರಡೂ ಕೈಗಳಿಂದ ಹೊಟ್ಟೆಯನ್ನು ಅಮುಕಿ ಹಿಡಿದು ಬುಸುಗುಟ್ಟುತ್ತ "ಸಾಯು ಸಾಯು" ಎಂದು ಬೊಬ್ಬಿಡುತ್ತಿದ್ದ. ಅವಾಚ್ಯ ಶಬ್ದಗಳಿಂದ ಜಗತ್ತನ್ನೇ ಬಯ್ಯುತ್ತಿದ್ದ— ಆಗವನಿಗೆ ಜಗತ್ತೇ ಇದಿರಾಳಿಯಾಗಿತ್ತು!

ಎದುರಿನ ಹೊಟೇಲಿನಿಂದ ರಾಯರೊಬ್ಬರು ಕೈತುಂಬಾ ತಿಂಡಿ ತಂದು ಅಲ್ಲಿಯೇ ಬಿದ್ದುಕೊಂಡಿದ್ದ ನಾಯಿಯೊಂದರ ಮುಂದೆ ಸುರುವಿಬಿಟ್ಟರು. ಅವನು ನೋಡುತ್ತಲೇ ಇದ್ದ. ನಾಯಿ ತಿಂಡಿಯನ್ನು ಮೂಸಿ ತಿನ್ನನೇ

ಬಿಟ್ಟಿತು. ಕಾರಣ ಅದರ ಹೊಟ್ಟೆ ತುಂಬಿತ್ತೋ ಏನೊ? ಯಾವುದೋ ಆಸೆ ಅವನನ್ನು ಹೊಟೇಲಿನ ಬಾಗಿಲಿನ ವರೆಗೂ ಕರೆತಂದಿತು. ರಾಯರು ಕಾಫಿ ಕುಡಿದು ಹೊರಬಂದಾಗ ಅವನು ಕೈ ಜೋಡಿಸಿ "ಧರ್ಮರ್ಾs" ಎಂದು ಅಳುತ್ತ ಬೇಡಿದ.

"ದರಿದ್ರದವು—ಹೋಗ್ರೋ ಆಚೆಗೆ!" ರಾಯರು ಅಬ್ಬರಿಸುತ್ತ—ಅವನನ್ನೆ ಕೆಂಗಣ್ಣಿನಿಂದ ನೋಡುತ್ತ ಬಯ್ಯುತ್ತ ನಡೆದೇ ಬಿಟ್ಟರು.

ಅವರಬ್ಬರಕ್ಕೆ ಹೊಟೇಲಿಗೆ ಹೊಟೇಲೇ ಹೊರಕ್ಕೆ ಬಂದಿತ್ತು. ಅವನು ಅಲ್ಲಿಯೇ ಹಾಗೆಯೇ ನಿಂತಿದ್ದ. ಹೊಟೇಲಿನಿಂದ ಹೊರಬಂದ ಅಷ್ಟೂ ಜನರಲ್ಲಿನ ಒಬ್ಬರಾದರೂ ಅವನ ಬಗೆಗೆ ದಯೆದೋರಲಿಲ್ಲ. ಬಂದಂತೆ ಅವರೆಲ್ಲ ಹಿಂದಿರುಗಿ ತಂತಮ್ಮ ಕೆಲಸಗಳಲ್ಲಿ ಮಗ್ನರಾದರು.

ಅವನು ಎಲ್ಲರನ್ನೂ ಕ್ಷಣಕಾಲ ಪರ್ಯಂತ ನೋಡುತ್ತ ನಿಂತ. ಮುಖದ ಮೇಲೆ ತಿರಸ್ಕಾರದ ಛಾಯೆ ಹರಡಿಕೊಂಡಿತ್ತು. ಅಪ್ಪಳಿಸಿ ಬಿಡಲೇ ಎನ್ನುವ ಸಿಟ್ಟೂ ಅವನಲ್ಲಿತ್ತು — ಆದರೂ ಸುಮ್ಮಗಾದ. ತುಟಿಯೆತ್ತದೇ ಮುಂಬರಿಯ ಹತ್ತಿದ.

ಆಗಿನವನ ಮಿದುಳಲ್ಲಿ "ನಾಯಿಗಿಂತ ನಾನು ಕಡೆಯೇ?" ಎಂಬ ವಿಚಾರ ಮೂಡಿತ್ತು!

ಕತ್ತಲಾಗುತ್ತ ಬಂತು. ಪೇಟೆಯಲ್ಲಿ ಒಂದೊಂದಾಗಿ ದೀಪಗಳು ಮೂಡಿಕೊಳ್ಳಹತ್ತಿದುವು—ಜನಸಂಚಾರ ಕೊಂಚ ಹೆಚ್ಚಿತ್ತು. ಅದರಲ್ಲೂ ಹೆಂಗಸರ ಹಿಂಡೇ ಹೆಚ್ಚು. ಈ ಹಿಂಡೆಲ್ಲ ದೇವಾಲಯದತ್ತ ಸಾಗಿತ್ತು. ಅವರೆಲ್ಲರನ್ನೂ ನೋಡುನೋಡುತ್ತ ಅವನು ಮುನ್ನಡೆಯುತ್ತಿದ್ದ. ನೋಡುನೋಡುತ್ತಲಿದ್ದಂತೆಲ್ಲ ಅವನ ಹೊಟ್ಟೆಯಲ್ಲಿ ಕಿಚ್ಚು ಸುರಿದಂತಾಗುತ್ತಿತ್ತು. ಅವರೆಲ್ಲರಲ್ಲಿ ಮೈ ಮೂಡಿಕೊಂಡು ಮುಖದಲ್ಲಿ ಕುಣಿದಾಡುವ ಸಂತಸವನ್ನು ಕಂಡಂತೆಲ್ಲ ಅವನಲ್ಲಿ ಯಾವುದೋ ಅಜ್ಞಾತ ವೇದನೆ

ತುಂಬುತ್ತ ಬರುತ್ತಿತ್ತು. ಅವನ ನಡಿಕೆಯ ಗತಿ ಮಂದವಾಗಹತ್ತಿತು. ಅವನ ಹೆಜ್ಜೆ ಅವನಿಗೇ ಭಾರವಾದಂತೆ ಭಾಸವಾಗತೊಡಗಿತು. ಎಲ್ಲೆಲ್ಲೂ ಕತ್ತಲೆಯೇ ಅವನ ಕಣ್ಣಿಗೆ ತೋರಹತ್ತಿತು. ಆ ಕತ್ತಲೆಯಿಂದ ಅವನು ಬೆಳಕಿನ ಹಾದಿಯನ್ನು ನಿರೀಕ್ಷಿಸುತ್ತಿದ್ದ. ಬೆಳಕು ಹಚ್ಚಿಟ್ಟಲ್ಲೆಲ್ಲ ಧಾವಿಸುತ್ತಿದ್ದ. ಕೈಮುಗಿದು ಕರುಣೆಯಿಂದ ಬೇಡುತ್ತಿದ್ದ. ಆದರೇನು? ಅವನ ಪಾಲಿಗೆ ಎಲ್ಲವೂ ಎಲ್ಲೆಲ್ಲಿಯೂ ಕತ್ತಲೆಯೆ! ಅವನ ನಿರೀಕ್ಷೆಯ ಬೆಳಕು ಹುಲ್ಲೆಯಂತೆ ಜಿಗಿಜಿಗಿದು ಮುಂದುಮುಂದಕ್ಕೆ ಹಾರುತ್ತಿತ್ತು! ಅದನ್ನು ಹಿಡಿಯಹೋಗುವುದು ಮೂರ್ಖತನವೆಂಬುದನ್ನವನು ಮನಗಂಡ. ಅವನ ಆಶೆ ಬಾಡಹತ್ತಿತು. ಪುನಃ ಅದಕ್ಕೆ ನೀರುಕೊಟ್ಟು ಬದುಕಿಸುವ ಹವ್ಯಾಸಕ್ಕೆ ಅವನು ಉತ್ತೇಜಿತನಾಗಲಿಲ್ಲ. ಜೀವನದ ಮೇಲೆಯೇ ಅವನಿಗೆ ಜುಗುಪ್ಸೆ ಹುಟ್ಟಲಾರಂಭವಾಗಿತ್ತು.

ಅವನ ಮನಸ್ಸು ಪುನಃ ಅವನನ್ನು ಕೇಳಿತು— "ನೀನು ಮಾನವ! ಸರ್ವ ಪ್ರಾಣಿಗಳಿಗಿಂತ ಶ್ರೇಷ್ಠ! ಹೀಗಿದ್ದೂ ನಿನಗೆ ಈ ಅವಸ್ಥೆ ಹೇಗುಂಟಾಯಿತು?" ಎಂದು.

ಉತ್ತರವಿದ್ದರಲ್ಲವೆ ಆ ಮಾತಿಗೆ ಬೆಲೆ! ಅವನು ಉತ್ತರವೀಯಲೇ ಇಲ್ಲ. ಅದೂ ಒಂದು ಸಮಸ್ಯೆಯೇ ಆಗಿತ್ತು ಅವನಿಗೆ!

ಆ ದಾರಿಗೆ ಅವನು ತಿರುಗಿದಾಗ ಒಂದು ದೊಡ್ಡ ಮನೆಯ ಮುಂದೆ ಒಂದು ಕಾರು ನಿಂತಿರುವುದನ್ನು ಕಂಡ. ಹಾಗೆಯೇ ರಾಯರೊಬ್ಬರು ಬೆವರಿದ ತಮ್ಮ ಮುಖವನ್ನು ಒರೆಸುತ್ತ ಆ ಮನೆಯಿಂದ ಹೊರಬಿದ್ದುದನ್ನೂ ಕಂಡ.

"ಮರೆಯಬಾರದು — ಬಂಗಾರದ ಬಳೆ ಅವಶ್ಯವಾಗಿ ತರಬೇಕು" ಎನ್ನುತ್ತ ನೀರೆಯೋರ್ವಳು ಬಾಗಿಲ ಬಳಿ ಬಂದಳು.

"ಛೇ ಛೇ ಮರೆಯುವುದುಂಟೇ?" ಎನ್ನುತ್ತ ಕಾರನ್ನೇರಿದರು ರಾಯರು.

ಬಾಗಿಲಿನಲ್ಲಿದ್ದವಳು ಸೂಳೆ ಎಂದು ಅವನಿಗೆ ಮನವರಿಕೆಯಾಯಿತು. ಏಕೋ—ಓಡುತ್ತ ಕಾರಿನ ಬಳಿ ಬಂದ. ಕಾರನ್ನೇರಿದ ರಾಯರು ಆಕೆಯನ್ನೇ ನೋಡುತ್ತಲಿದ್ದರು. ಅವರ ಕಣ್ಣು ಅವಳಲ್ಲಿಯೇ ಕೇಂದ್ರೀಕರಿಸಿತ್ತು. ಅಂದಮೇಲೆ ಇವನು ಕಣ್ಣಿಗೆ ಬೀಳುವುದಾದರೂ ಹೇಗೆ?

ಆದರೂ ರಾಯರಿಂದ ತನಗೇನಾದರೂ ಸಹಾಯ ದೊರಕೀತೆಂಬ ಬಲವಾದ ಆಸೆ ಅವನನ್ನು ಮುಂದುವರಿಯಲು ಬಿಡಲಿಲ್ಲ—ಏನನ್ನೋ ಹೇಳಬೇಕೆಂದು ಬಿಚ್ಚಿದ ಬಾಯಿ ಎರಡು ಮೂರು ಬಾರಿಯೂ ಏನೂ ಹೇಳದೇ ಮುಚ್ಚಿಕೊಂಡಿತು.

ರಾಯರು ಮಾತ್ರ ಅವಳನ್ನೇ ಇನ್ನೂ ನೋಡುತ್ತಲಿದ್ದರು. ಅವಳೂ ಅವರನ್ನೇ ರೆಪ್ಪೆಹಾಕದೆ ನೋಡುತ್ತಲಿದ್ದಳು. ಈರ್ವರ ಮುಖದಲ್ಲಿಯೂ ಕಿರುನಗೆಯ ರೇಷೆ ಮೂಡಿತ್ತು. ನಾಲ್ಕೂ ಕಣ್ಣುಗಳು ಮೂಕಭಾಷೆಯನ್ನಾಡುತ್ತ ಅಭಿಪ್ರಾಯ ವಿನಿಯಮದಲ್ಲಿದ್ದುವು. ಆ ನಾಲ್ಕೂ ಕಣ್ಣುಗಳ ನಡುವೆ ಚೆಲುವಿನ ಸೃಷ್ಟಿಯೊಂದು ಮೂಡಿ, ಅವರು ಅದನ್ನು ನೋಡುವುದರಲ್ಲಿಯೇ ತನ್ಮಯರಾಗಿದ್ದರೋ ಎನ್ನುವಂತಿತ್ತು ಅವರ ನೋಟ.

ಎದೆಯಾಸೆಯನ್ನು ಬಿಗಿಹಿಡಿದು ಬೇಸತ್ತ ಅವನು ಕೊನೆಗೊಮ್ಮೆ ಎದೆಯನ್ನು ಕಲ್ಲಾಗಿ ಮಾಡಿ ಕೇಳಿಯೇ ಬಿಟ್ಟ—

“ರಾಯರೇ, ಊಟವಿಲ್ಲದೇ ನಾಲ್ಕು ದಿನವಾಯ್ತು—” ಹೊಟ್ಟೆಯ ಹಸಿವು ಅವನ ಕಣ್ಣು ಮುಖಗಳಿಂದ ಉಕ್ಕಿ ಚಿಮ್ಮುತ್ತಿತ್ತು.

“ಬಂಗಾರದ ಬಳೆ—ಮರತೀರಿ—ಜೋಕೆ” ಪುನಃ ನೆನಪನ್ನಿತ್ತಳು ಸೂಳೆ.

“ಮರೆಯುವುದುಂಟೇ?” ತುಟಿಯರಳಿಸುತ್ತ ತರುವೆನೆಂಬ ಭರವಸೆಯಿತ್ತರು ರಾಯರು.

“ರಾಯರೇ ಹೊಟ್ಟೆಗಿಲ್ಲ” ಅಳುವ ದನಿ ಚೀರಿಬಿಟ್ಟಿತು.

"ಹೊಟ್ಟೆಗಿಲ್ಲವಿದ್ದರೆ—ಸಾಯು" ಸಿಟ್ಟಿನ ಸಿಡಿಲು ಒಮ್ಮೆಲೆ ಗುಡುಗಿ ಬಿಟ್ಟಿತು.

ಕಾರು ಭುರ್ರೆಂದು ಹೊರಟುಹೋಯಿತು — ನೀರೆ ಮರೆಯಾದಳು. ಅವನು ತನ್ನದೇ ನೆರಳು ತನ್ನ ಮುಂದೆ ಬಿದ್ದು ತನ್ನನ್ನೇ ಅಣಕಿಸುವುದನ್ನು ಕಂಡ. ಅವನಿಗೆ ಸಿಟ್ಟು ತಲೆಗೇರಿತು. ಹಲ್ಲುಗಳು ತುಟಿಗಳನ್ನು ಕಚ್ಚಿ ಕೊಂಡುವು. ಕದಪು ಕೆಂಪೇರಿತು. ಕಣ್ಣು ಕಿಡಿಗಳನ್ನುದುರಿಸಲಾರಂಭ ಮಾಡಿತು. ಮೂಗಿನ ಸೊಳ್ಳೆಗಳು ಉಬ್ಬಿ ನಿಟ್ಟುಸಿರ ಸುಯ್ಲುಗಳನ್ನು ಚೆಲ್ಲ ತೊಡಗಿದುವು.

"ಸೂಳೆಗೆ ಬಂಗಾರದ ಬಳೆ—ನನಗೆ ಸಾವು!" ಉದರನಿರ್ವಹಣ ಕ್ಕಾಗಿ ಕಾರಿನ ರಾಯರು ಒಳ್ಳೆಯ ಉಪಾಯವನ್ನು ಸೂಚಿಸಿದ್ದರು. ಅವು ಅವನ ಕಿವಿಗಳನ್ನು ಬಿಡಲೊಪ್ಪದೆ ಆ ಕಿವಿಯಿಂದ ಈ ಕಿವಿಯ ಪರ್ಯಂತ ಗಿರಗಿರನೇ ತಿರುಗುತ್ತಿದ್ದುವು.

ಮನಸ್ಸಿಗೂ ಅವನಿಗೂ ತುಮುಲವಾಗಹತ್ತಿತು.

"ನೀನು ಸಾಯಬೇಕು. ಅದುವೇ ನಿನ್ನ ಗುರಿಯಾಗಿದೆ!" ಮನಸ್ಸು ಅವನನ್ನು ಮೂದಲಿಸಿತು.

"ಏತಕ್ಕಾಗಿ?" ಅವನು ಕೇಳಿದ.

"ಹೊಟ್ಟೆಗಿಲ್ಲದುದಕ್ಕಾಗಿ" ಅದು ಹೇಳಿತು.

"ಏಕಿಲ್ಲ? ಹೊಟ್ಟೆತುಂಬಿದವರೆಲ್ಲ- ತುಂಬದಿದ್ದವರ ಮೇಲೆ ದಯೆ ದೋರಿದರೆ............?"

"ಹುಚ್ಚಾ, ಹಾಗಿದ್ದಲ್ಲಿ ಬಂಗಾರದ ಬಳೆ ಸೂಳೆಗೇಕೆ ಸೇರುತ್ತಿತ್ತೋ?"

ಸರಿ! ತುಮುಲ ನಿಂತಿತು. ಅವನು ಹಿಂದಿಗಿಂತ ಹೆಚ್ಚಿನ ಗತಿಯಿಂದ ನಡೆಯಹತ್ತಿದ.

"ಸೂಳೆಗಿಂತ, ಬೀದಿಯ ನಾಯಿಗಿಂತ ನಾನು ಕೀಳು. ಇವುಗಳಿಗಿದ್ದ ಬೆಲೆ ನನಗಿಲ್ಲ. ಇಷ್ಟು ವಯಸ್ಸಿನ ಜೀವಕ್ಕೆ ಒಪ್ಪೊತ್ತಿನ ಊಟದ ಕಾಸಿಗೂ ಗತಿಯಿಲ್ಲ. ಈ ರೀತಿಯಾಗಿದ್ದು ಈ ಜಗತ್ತಿನಲ್ಲಿ ನಾನು ಉಳಿದು ಸಾಧಿಸ ಬೇಕಾದ ಕಾರ್ಯವಾದರೂ ಯಾವುದು? ಯಾರಿಗಾಗಿ ನಾನೀ ಭಾರವಾದ ಬಾಳ ಹೊರೆ ಹೊತ್ತು ನಿಲ್ಲಬೇಕು? ಇಲ್ಲ-ಇಲ್ಲ-ಯಾರಿಗೂ ಬೇಡವಾಗಿದ್ದು ಭೂಮಿಗೆ ಭಾರವಾಗಿ ನಾನು ಇರಬಾರದು—ನನ್ನ ಬಾಳ ಹೊರೆ ಭೂಮಿಗೆ ಬಹು ಭಾರವಾದೀತು .. .. .." ತಲೆಯಲ್ಲಿ ಬಿಡುವಿಲ್ಲದ ಯೋಚನೆ ಗಳೆದ್ದಂತೆಯೇ ಅವನ ಗತಿ ಹೆಚ್ಚುತ್ತಲಿತ್ತು. ಅವನ ಸಂಕಲ್ಪ ಶೂನ್ಯ ಕಾಣುವುದಿತ್ತು.

ಕತ್ತಲೆಯು ಏರುತ್ತ ಹೋಯಿತು. ಪಟ್ಟಣದ ಜ್ಯೋತಿಗಳೆಲ್ಲ ತಮ್ಮಿಂದ ತಾವಾಗಿ ನಾಶಹೊಂದಿದುವು. ಕತ್ತಲೆಯು ಜಗತ್ತನ್ನೆ ಮರೆಯಿಸಿಬಿಟ್ಟಿತು— ಅದರೊಡನೆ ಅವನೂ ಮರೆಯಾದ.

ಪುನಃ ಜ್ಯೋತಿ ಮೂಡಿದಾಗ ಯಾರೂ ಅವನನ್ನು ಕಾಣಲಿಲ್ಲ.



# ಸ್ಫೂರ್ತಿಯ ಸಂಪತ್ತು

ಶ್ರೀ ಎಸ್. ವೆಂಕಟರಾಜರು

★

ಶ್ರೀಯುತರು ನಮ್ಮಲ್ಲಿಯ ಸುಪ್ರಸಿದ್ಧ ಕವಿಗಳು ಇವರ ಅನೇಕ ಕತೆ–ಕವನ—ಏಕಾಂಕಗಳು ಜಯಕರ್ನಾಟಕ—ಪ್ರಬುದ್ಧ ಕರ್ನಾಟಕ–ಗಳಲ್ಲಿ ಅಚ್ಚಾಗಿವೆ. 'ವೀರಭೂಮಿ'ಯೆಂಬ ಕಾದಂಬರಿಯನ್ನು ಪ್ರಕಟಿಸಿದ್ದಾರೆ. 'ನಮ್ಮ ಕತೆಗಳು' 'ಅಂತ ರಂಗದ ಕತೆಗಳು' 'ನಾಡಕತೆಗಳು' 'ಮಧುವನ' ಮುಂತಾದ ಕಥಾಸಂಗ್ರಹಗಳಲ್ಲಿ ಇವರ ಕತೆಗಳು ಅಚ್ಚಾಗಿವೆ. 'ರಂಗಭೂಮಿ' 'ಪ್ರಾಯಶ್ಚಿತ್ತ' 'ಉದ್ಧಾರ' 'ಒಳಗುಟ್ಟು' ಮುಂತಾದ ಹಲವು ಏಕಾಂಕ ನಾಟಕಗಳನ್ನು ಬರೆದಿದ್ದಾರೆ. 'ಪರಾಗ' 'ನಮ್ಮ ಕವಿತೆಗಳು' 'ಕಾವ್ಯಸಾಮ್ರಾಜ್ಯ' ಮುಂತಾದ ಕವಿತಾಸಂಗ್ರಹ ಗಳಲ್ಲಿಯೂ ಇವರ ಕವಿತೆಗಳು ಅಚ್ಚಾಗಿವೆ. ಶ್ರೀಯುತರು ಕನ್ನ ಡದ ಬಗೆಗೆ ಹೆಚ್ಚಿನ ಆದರವನ್ನಿಟ್ಟುಕೊಂಡು ಅದರ ಉನ್ನತಿ ಗಾಗಿ ಬಗೆಬಗೆಯಿಂದ ದುಡಿದ—ದುಡಿಯುತಲಿರುವ ತರುಣರು. ಕವಿತೆಗಳಲ್ಲಿ ಇವರ ಕೈ ಮೇಲು. ಉದಾತ್ತ ಆದರ್ಶವನ್ನಿಟ್ಟು ಬರೆದ ಇವರ ಕತೆಗಳು ಗಂಭೀರ ಗತಿಯಿಂದ ಸಾಗಿ ಒಂದು ಗದ್ಯಕಾವ್ಯದಂತೆ ಕಾಣುವುವು ಭಾವಜೀವಿಗಳಾದುದರಿಂದಲೋ ಏನೋ ಇವರ ಕತೆಗಳಲ್ಲಿ ವಸ್ತುವಿಗಿಂತಲೂ ಭಾವಕ್ಕೆ ಪ್ರಾಧಾನ್ಯ ಹೆಚ್ಚು.

ದಿನನಿತ್ಯದಲ್ಲೂ — ದೇವರ ಗುಡಿಯ ಒಂದು ಮೂಲೆಯಲ್ಲಾಗಲೀ, ಸರೋವರದ ಪಾವಟಿಗೆಯ ಮೇಲಾಗಲೀ ಅವನನ್ನು ಕಾಣುತ್ತಲೇ ಇರುವೆವಾದರೂ — ಅವನ ವಿಚಾರವಂತೂ ಪ್ರಾಯಶಃ ಯಾರಿಗೂ ತಿಳಿದಿಲ್ಲ. ಅವನ ಊರಾವುದೋ! ಹೆಸರೇನೋ! ಈಗಂತೂ ಒಂದು ವರ್ಷದಿಂದೀಚೆ ಇಲ್ಲೇ ಉಳಿದುಕೊಂಡಿದ್ದಾನೆ. ಮೊತ್ತಮೊದಲು ಬಂದ ವೇಳೆ ಯಾರೋ ಒಬ್ಬ ದಾರಿಹೋಕ ಬೈರಾಗಿ ಎಂದು ನಾವೆಲ್ಲಾ ಎಣಿಸಿದ್ದೆವು. ಆದರೆ ಬೈರಾಗಿಗಳಿಗಿರಬೇಕಾದ ಗಡ್ಡವಾಗಲೀ—ಕಾವೀ ತೊಡಿಗೆಯಾಗಲೀ ಅವನಿಗಿಲ್ಲ. ಅಥವಾ ತಿರುಪೆಗಾಗಿ ಬೀದಿ ಬೀದಿ ಸುತ್ತುತ್ತಲೂ ಇಲ್ಲ. 'ಏನಿವನಿಗೆ ಧಾಡಿ! ಲಟ್ಟಗೆ ಬೆಳೆದು ದೊಡ್ಡ ಭೂವನ ಹಾಗಿದ್ದಾನೆ' ಎನಿಸುವಂತಹ ದೇಹಪ್ರಕೃತಿಯವನದು, ಹರಯದಾಳು. ಭಾವಶೂನ್ಯವಾದ ಮೊಗದಲ್ಲಿ ಒಂದಿಷ್ಟು ಗೆಲವನ್ನು ತುಂಬುತ್ತಿದ್ದರೆ, ಅವನೊಬ್ಬ ಸುಂದರ ಯುವಕನೆಂದು ಧಾರಾಳವಾಗಿ ಹೇಳಬಹುದಾಗಿತ್ತು. ಎಂದ ಮೇಲೆ ಮತ್ತೇಕೆ ಅವನಿಗೀ ದುರ್ದಶೆಯೋ! ಯಾವ ಸಾಂಸಾರಿಕ ವ್ಯಥೆಯಿಂದಾಗಿ ನೊಂದು, ಅದಕ್ಕೆ ತಿಲಾಂಜಲಿಯನ್ನಿತ್ತು ಈ ವೇಷವನ್ನು ತಳೆದಿರುವನೋ—ಯಾರು ಬಲ್ಲ?

ತನ್ನ ಉದರಭರಣಕ್ಕಾಗಿ ಅವನು ಯಾವುದೊಂದು ಉದ್ಯೋಗವನ್ನೂ ಕೈಗೊಂಡಿದ್ದಿಲ್ಲ. ಗುಡಿಯಲ್ಲಿ ಪೂಜಾದಿ ವಿನಿಯೋಗಗಳು ಮುಗಿದು ಧರ್ಮವು ಹಂಚಲ್ಪಡುತ್ತಿದ್ದಾಗ ಮುನ್ನಡೆದು ಕೈನೀಡಿ ಎರಡು ಬೊಗಸೆ ಅನ್ನವನ್ನು ಗಳಿಸುತ್ತಿದ್ದ. ಅಷ್ಟೇ ಅವನ ಪ್ರಾಣ ಪೋಷಕ!

ಇಂತಹ ವಿಚಿತ್ರ ವ್ಯಕ್ತಿಯನ್ನು ಬೊಟ್ಟಿಟ್ಟು ಕರೆಯಲು ಅವನ ಹೆಸರೇ ತಿಳಿಯದಲ್ಲಾ—ಎಂಬುದೊಂದೇ ನನ್ನ ವ್ಯಥೆ! ಆದರೂ ಆ ವಿಶೇಷ ವಸ್ತು

ವನ್ನು ನಿತ್ಯ ಜೀವನದಲ್ಲಿ ಕರೆದು ಕೊಂಡಾಡದೆ ನಿರ್ವಾಹವಿಲ್ಲ. ಅದಕ್ಕಾಗಿ ನಾನು ಬಹಳವಾಗಿ ಯೋಚಿಸಿ ಯೋಚಿಸಿ 'J. B.' ಎಂದೇ ನಾಮಕರಣ ಮಾಡಿಬಿಟ್ಟೆ!

ಊರಿನ ತೆಂಕುಗಲ್ಲಿಯ ಮೂಲೆಯಲ್ಲಿ ನಮ್ಮ ಮನೆ. ಸಾಮಾನ್ಯತಃ ನಮ್ಮ ಕೂಟದವರ ವಸತಿಯೆಲ್ಲಾ ಅಲ್ಲೇ! ನಮ್ಮ ಮನೆಯು ಚಿಕ್ಕದಾದರೂ ಅದರಲ್ಲಿ ದಾರಿದ್ರ್ಯವು ತಾಂಡವವಾಡುತ್ತಿದ್ದಿಲ್ಲ. ನಮ್ಮ ಮಾತುಶ್ರೀಯವರು ತಮ್ಮ ಹಳೆಯ ಅಪರಾಧಿಗಳಿಂದ ನಿರ್ದಾಕ್ಷಿಣ್ಯವಾಗಿ ಕಪ್ಪಕಾಣಿಕೆಯನ್ನು ವಸೂಲುಮಾಡಿ, ಮನೆಯನ್ನು ಬೆಳಗಿಸುತ್ತಿದ್ದುದರಿಂದ ಜೀವನ ನಿರ್ವಾಹದ ಗೋಚರವೇ ನನಗಿದ್ದಿಲ್ಲ.

ನನಗಾಗ ಹದಿನೈದು ವರುಷ. ಪ್ರಪಂಚವನ್ನು ಹರಡಿದ ಹಣಕಾಸುಗಳ ಮುಗ್ಗಟ್ಟಿನಿಂದಾಗಿ 'ನಮ್ಮ ಪ್ರಪಂಚ'ದ ವ್ಯಾಪಾರಕ್ಕೂ ಧಕ್ಕೆ ತಗಲದಿರಲಿಲ್ಲ. ಪ್ರಾಯಭರಿತಳೆನಿಸಿಕೊಳ್ಳುವಷ್ಟು ನಾನು ಪ್ರಬುದ್ಧಳಾಗಿದ್ದರೂ ಯೋಗ್ಯ ಗಿರಾಕಿಗಳ ಅಭಾವದಿಂದಲೋ ಏನೋ–ಮುಂದೆ ನೋಡೋಣ–ಈಗಂತೂ ಹುಡುಗಿ ಕಲಿಯುತ್ತಿರಲಿ — ಎಂದು ನಮ್ಮಮ್ಮನವರು ನನ್ನ ಧಾರಣೆಯನ್ನು ಏರಿಸುವ ಯತ್ನದಲ್ಲಿದ್ದರು. ಅದು ಹೇಗೂ ಇರಲಿ! ನಾನಂತೂ ಆಗ ಏಳನೇ ದರ್ಜೆಯಲ್ಲಿ ಕಲಿಯುತ್ತಿದ್ದೆ.

ಒಂದು ದಿನ ನಾನು ಜಯೆ–ಸರಳೆಯರೊಂದಿಗೆ ಗುಡಿಗೆ ಹೋಗಿದ್ದೆ. ಗುಡಿಯ ಒಂದು ಮೂಲೆಯಲ್ಲಿ ಅವನು ಶೂನ್ಯದೃಷ್ಟಿಯಿಂದ ಎಲ್ಲರನ್ನೂ ನೋಡುತ್ತ–ಆದರೆ ಯಾವುದರ ಅರಿವೂ ಇಲ್ಲದೆ–ಕುಳಿತಿದ್ದ.

ಅವನನ್ನು ನೋಡಿ ಜಯೆಯು, 'ನೋಡೆ! ಇವ ಒಬ್ಬ ಬೈರಾಗಿ ಯಾರೆ?' ಎಂದಳು.

ನಾನು — 'ಓಹೋ! ಅವನೆ? ನಿನಗೆ ಗೊತ್ತಿಲ್ಲವೆ? The world famous J. B! ಎಂದರೆ ಇವನೇ!' ಎಂದೆ.

'ಎಂದರೆ ಏನು?' ಎಂದು ಕೇಳಿದಳು ಸರಳೆ.

'ಎಂದರೆ — J. B. ಅರ್ಥಾತ್ — ಜಡಭರತ!' ಎಂದು ಗೇಲಿ ಮಾಡಿಬಿಟ್ಟೆ!

ಅವನಿಗೆ ತಮಾಷೆ ಮಾಡಬೇಕೆಂದು ನನ್ನ ಉದ್ದೇಶವಿದ್ದಿಲ್ಲ. ಆದರೆ ನಾನು ಆಡಿದ ಮಾತು ಸ್ವಲ್ಪ ಗಡುಸಾಯಿತು. ಅವನಿಗೆ ಕೇಳಿತೋ ಏನೋ! ಎಂದು ಹಿಂದಿರುಗಿ ಅವನ ಕಡೆ ನೋಡಿದೆ.

ಅವನು ಮೊಗವೆತ್ತಿ ನನ್ನನ್ನು ನೋಡುತ್ತಿದ್ದ. ತೀಕ್ಷ್ಣವಾದ ನೋಟ! ಆದರೂ ಅದೊಂದು ತರದ ಮೋಹಕತೆಯು ಮನೆಮಾಡಿದ್ದಿತು!

ಗೆಳತಿಯರೆಲ್ಲಾ ನನ್ನ ಮಾತುಕೇಳಿ ನಗುತ್ತಿದ್ದರು. ಆದರೆ ನನಗೆ ಮಾತ್ರ ನಗಲು ಸಾಧ್ಯವಾಗದೆ ಉಸಿರು ಹಿಡಿದಂತಾಯಿತು!

ಮನೆಯನ್ನು ಸೇರಿದ ಮೇಲೂ ಆ ನೋಟವನ್ನು ಹಲವು ತಡವೆ ಯೋಚಿಸಿಕೊಂಡೆ. 'ಏನೋ ಬೂದಿ ಮುಚ್ಚಿದ ಕೆಂಡ' ಎಂದುಕೊಂಡು ಮತ್ತೆ ಸುಮ್ಮನಾದೆ.

ಕೆಲವು ದಿನಗಳು ಸಂದುವು ನಮ್ಮ ಮಾತುಶ್ರೀಯವರ ಹಳೆಯ ಅಪರಾಧಿಗಳ ಜೇಬೆಲ್ಲಾ ಬರಿದಾಗತೊಡಗಿದುವು! ಹೆರರ ಸ್ನೇಹದ ಬಲ ದಿಂದ ಬೆಳಗುತ್ತಿದ್ದ ನಮ್ಮ ಮನೆಯ ದೀಪವು ಕ್ರಮೇಣ ಮುಸುಕಾಗು ವಂತಿದ್ದಿತು. ಆದರೂ ನಮ್ಮಮ್ಮನವರಿಗೆ ಮನೆದ ಹೊಸ ಬಾಣ ತಮ್ಮ ಬಳಿಯಿರುವುದೆಂದು ಮಹಾಧೈರ್ಯ! ಆದುದರಿಂದ ಅವರು ಮೆಲ್ಲಮೆಲ್ಲನೆ ತಮ್ಮ ಕುಲವಿದ್ಯೆಯನ್ನು ನನ್ನ ತಲೆಯೊಳಗೆ ತುರುಕತೊಡಗಿದರು. ಆದರೆ ನಾನು 'ಅಯ್ಯೋ! ಪ್ರೇಮವೆಂಬ ದಿವ್ಯ ವಸ್ತುವನ್ನು ಕಟುಕರಿಗಿಂತಲೂ ಕಡೆಯಾಗಿ ಕೊರಳು ಹಿಸುಕುವ ಕೊಲೆತನ ನನಗೆ ಬೇಡವಮ್ಮಾ!' ಎಂದು ಅತ್ತುಬಿಟ್ಟೆ. ಆ ಮೇಲೆ ಅವರ ಯತ್ನ ಅಷ್ಟರಲ್ಲೇ ನಿಂತಿತು.

ನಾಲ್ಕು ದಿನಗಳ ಮೇಲೆ ಸರಳೆಯೊಂದಿಗೆ ಗುಡಿಗೆ ತೆರಳಿದ್ದೆ. ಶ್ರಾವಣ ಮಾಸ. ದೇವರ ದರ್ಶನಕ್ಕೆ ಬರುತ್ತಿದ್ದವರ ಸಂಖ್ಯೆ ಬಹಳ. ನಾವು

ಕಾಲ್ತುತೊಳೆಯಲೆಂದು ಸರೋವರಕ್ಕಿಳಿದೆವು. ಪಾವಟಿಗೆಯು ಪಾಚಿಹಿಡಿದು ಜಾರುತ್ತಿದ್ದಿತು. ನಾನು 'ಬೀಳಬೇಡ ಹುಡುಗಿ' ಎಂದು ಸರಳೆಗೆ ಬುದ್ಧಿ ಹೇಳುತ್ತಿದ್ದಂತೆಯೇ ಜಾರಿಬಿಟ್ಟೆ. ಆಧರಿಸಲು ಏನೊಂದೂ ದೊರೆಯಲಿಲ್ಲ. ಹೆದರಿ 'ಅಯ್ಯೋ!' ಎಂದು ಕೂಗಿ ಕಣ್ಮುಚ್ಚಿಬಿಟ್ಟೆ!

ಆದರೆ ನಾನು ಬೀಳಲಿಲ್ಲ. ಯಾರೋ ಮಿಂಚಿನ ವೇಗದಿಂದ ಬಂದು ನನ್ನನ್ನು ಮಧ್ಯದಲ್ಲೇ ಹಿಡಿದಂತಾಯಿತು. ಧೈರ್ಯದಿಂದ ಕಣ್ತೆರೆದು ನೋಡಿದೆ. ಅವನೇ! ನನ್ನ J B! ಅವನ ದೃಢವಾದ ಬಾಹುಪಂಜರ ದಲ್ಲಿ ನಾನು ಸುರಕ್ಷಿತಳಾಗಿ ಓಲಾಡುತ್ತಿದ್ದೆ!

ಕೃತಜ್ಞತೆಯಿಂದ ಅವನ ಮುಖವನ್ನು ನೋಡಿದೆ. ಅವನೂ ನನ್ನನ್ನು ದಿಟ್ಟಿಸಿದ. ಅದೇ ತೀಕ್ಷ್ಣವಾದ ಮೋಹಕವಾದ ನೋಟ!

* * * *

ಆ ದಿನ ರಾತ್ರಿ ನಾನು ಮಹಡಿಯಲ್ಲಿ ಕುಳಿತು ಓದುತ್ತಿದ್ದೆ. ಕೆಳಗಡೆ ನಮ್ಮ ತಾಯಿ — ಯಾರೊಡನೆಯೋ ಗಟ್ಟಿಯಾಗಿ ವಾದಿಸುತ್ತಿದ್ದರು.

'ಏನು ಬಂದೆಯೋ?'

'ಏನಿಲ್ಲ. ಆ ಹುಡುಗಿಯನ್ನು ನೋಡಬೇಕೆಂದು ಬಂದೆ.'

'ಯಾವ ಹುಡುಗಿ?'

'ಅವಳು! ನಿಮ್ಮ ಮಗಳೆಂದು ತೋರುವುದು!'

'ಏಕೆ?'

'ಏಕಿಲ್ಲ, ಹೀಗೆ.'

'ಹೀಗೆ ಎಂದರೆ? ಏನಾದರೂ ಗಂಟುಕೊಡಲು ತಂದಿರುವೆಯೋ?

'ಎಂತಹ ಗಂಟು?'

'ಮತ್ತೆ ಸುಮ್ಮನೆ ನೋಡಬೇಕೆಂದರೆ ಅದೇನು ಧರ್ಮದ ಭಾಗೀರಥಿ ಯಲ್ಲ! ನಾವು ಸೂಳೇರು. ನಮಗೆ ಬೇಕಾದ್ದು ಹಣ-ಸಂಪತ್ತು! ತಿಳೀತೇ?''

'ಸಂಪತ್ತು! ಎಂತಹ ಸಂಪತ್ತು?'

'ಹೋಗೋ ಆಚೆ! ನಿನಗೇಕೆ ಅದೆಲ್ಲಾ. ಬೇಡಿ ತಿನ್ನುವ ಬೈರಾಗಿಗೆ ಸೂಳೇರ ಸಾವಾಸವಂತೆ!' ಎಂದು 'ಧಡಮ್ಮ'ನೆ ಬಾಗಿಲು ಹಾಕಿಬಿಟ್ಟರು!

ಯಾರಿರ ಬಹುದೆಂದು ನೋಡಲು ಕಿಟಿಕಿಯಿಂದ ಕೆಳಗಡೆ ಹಣಕಿದೆ. ಮಹಡಿಯ ಬೆಳಕು ನನ್ನ ಮುಖದ ಮೇಲೆ ನಾಟ್ಯವಾಡಿ ಮನೆಯ ಮುಂದೆ ಬೀದಿಯ ಮೇಲೆ ಹಾಯಾಗಿ ಹರಡಿದ್ದಿತು. ಅ ವ್ಯಕ್ತಿಯು ಬೆಳಕಿನಲ್ಲಿ ಒಂದು ಕ್ಷಣ ಯೋಚಿಸುತ್ತಾ ನಿಂತು ಮೊಗವೆತ್ತಿ ಮೇಲೆ ನೋಡಿತು. ಅವನೇ! ಅದೇ ನೋಟ!

ಈ ಸಂವಿಧಾನವು ನಡೆದಂದಿನಿಂದ ಪ್ರತಿದಿನವೂ ಮುಂಜಾನೆ ನಮ್ಮ ಮನೆಯ ಮುಂಗಡೆ ಹೊಸ್ತಿಲ ಮೇಲೆ ಒಂದಷ್ಟು ಕಾಡುಹೂಗಳ ರಾಶಿ ಬಿದ್ದಿರುತ್ತಿತ್ತು. ಅಲ್ಲಿ ತಂದು ಹಾಕುವವರಾರೋ-ಏನು ಉದ್ದೇಶವೋ-ಯಾರಿಗೆ ಗೊತ್ತು?

ನಮ್ಮ ತಾಯಿ ಬಹಿಷ್ಠೆಯಾಗಿದ್ದರು. ಆದುದರಿಂದ ಮನೆಕೆಲಸಗಳನ್ನು ಸ್ವಲ್ಪ ಸ್ವಲ್ಪ ಸುಧಾರಿಸಲು ನಾನು ಮುಂಜಾನೆ ಬೇಗ ಎದ್ದಿದ್ದೆ. ಎದ್ದು ಮನೆಯ ಇದಿರು ಬಾಗಿಲನ್ನು ತೆರೆದು, ಹೊಸ್ತಿಲಿಗೆ ಹೂವಿಟ್ಟು ನಮಸ್ಕರಿಸುವ ಯತ್ನದಲ್ಲಿದ್ದೆ. ಅಷ್ಟರಲ್ಲಿ ಯಾರೋ ಬರುವ ಸದ್ದಾಯಿತು, ತಲೆಯೆತ್ತಿ ನೋಡಿದೆ. ಅವನೇ! ಬೊಗಸೆ ತುಂಬಾ ಒಂದಷ್ಟು ಹೂವಿನ ರಾಶಿ!

ಅವನನ್ನು ಕಂಡು ನಾನು ಭಯಗೊಂಡು ಬಾಗಿಲು ಹಾಕಿಕೊಳ್ಳುವುದರಲ್ಲಿದ್ದೆ. ಅಷ್ಟರಲ್ಲಿ ಅವನು 'ಒಂದು ಕ್ಷಣ ತಡೆ! ನಿನ್ನೊಡನೆ ಒಂದು ಮಾತು ಕೇಳಬೇಕೆಂದಿದ್ದೆ' ಎಂದ.

ನಾನು ನಿರ್ವಾಹವಿಲ್ಲದೆ ಸುಮ್ಮನೆ ನಿಂತೆ.

'ನಿನ್ನನ್ನು ಕಾಣಲೆಂದು ನಾನಂದು ಬಂದೆ. ಆದರೆ ನಿನ್ನ ತಾಯಿ ಬಿಡಲಿಲ್ಲ. ನೋಡು! ನಾನು ಸಂಸಾರದಲ್ಲಿ ಬೇಸರಗೊಂಡು ಈ ಊರಿಗೆ

ಹೊರಟುಬಂದೆ. ಪುನಃ ಅದರ ಬಲೆಗೆ ಬೀಳಬಾರದೆಂದು ನಿರ್ಧರಿಸಿದ್ದೆ. ಆದರೆ — ಆದರೆ ನೀನು ನನ್ನ ಧೃತಿಯನ್ನು ಕೆಡಿಸಿಬಿಟ್ಟೆ!' ಎಂದು ನನ್ನ ನ್ನೊಮ್ಮೆ ನೋಡಿದ.

'ನಿನ್ನನ್ನು ಕಂಡಾಗಲೇ ನನ್ನ ಹೃದಯವು ಹಂಬಲಿಸಿತು. ನಿನ್ನನ್ನು ಆ ದಿನ ಆತುಕೊಂಡಾಗಲಂತೂ ಅದರ ಮೇರೆ ಮೀರಿತು. ಮತ್ತೆ ನಿನ ಗಾಗಿಯೇ ಹುಚ್ಚನಾದೆ. ನೀನು ಸೂಳೆಯರ ಹುಡುಗಿ ಎಂದು ತಿಳಿದು ಬಂದರೂ ನೆಟ್ಟ ಪ್ರೇಮವನ್ನು ಕಿತ್ತೊಗೆಯಲು ಅಸಮರ್ಥನಾದೆ. ಆದರೆ— ನಿಮಗೆ ಬೇಕಾದುದು ಸಂಪತ್ತಂತೆ! ಹಣವಂತೆ! ನನ್ನ ಬಳಿ ಅಂತಹ ಸಂಪ ತ್ತಿಲ್ಲ. ಪ್ರೇಮವೇ ನನ್ನ ಸಂಪತ್ತು! ಅದಕ್ಕಾಗಿಯೇ ಈ ಹೂವಿನ ಕಾಣಿಕೆ. ಆದರೂ ನಿರಾಶೆಗೊಳ್ಳಲಿಲ್ಲ.ನಿನ್ನೊಡನೆ ಒಂದು ಮಾತನ್ನು ಕೇಳಬೇಕೆಂದಿದ್ದೆ. ಈಗ ಹೇಳು! ನಿನಗೆ ಬೇಕಾದ ಸಂಪತ್ತೆಂದರೆ, ಹಣವೆ?'

ನಾನು ಪ್ರಶ್ನೆಗೆ ಏನೊಂದು ಉತ್ತರವನ್ನೂ ಹೇಳಲು ಸಿದ್ಧಳಾಗಿರ ಲಿಲ್ಲ. ಸ್ವಭಾವಸಹಜವಾದ ಲಜ್ಜೆ — ನನ್ನನ್ನು ಬಯಸುವವರೆಷ್ಟು ಮಂದಿ! ಎಂಬ ಆಂತರಿಕ ಅಭಿಮಾನ—ಇವುಗಳ ಸಾಂಕರ್ಯದಿಂದಾಗಿ ಮನಸ್ಸು ಗಲಿಬಿಲಿಗೊಂಡಿತು. ಆದರೂ ಯೋಚನೆಗೆ ಅವಕಾಶಕೊಡದೆ ಸುಮ್ಮನಾದರೂ 'ಹೌದೆ'ಂದು ಹೇಳಿಯೇ ಬಿಟ್ಟೆ!

ಅವನು ಮರುಮಾತಾಡದೆ, ಬೊಗಸೆಯ ಹೂವನ್ನು ಚರಂಡಿಗೆ ಚೆಲ್ಲಿಬಿಟ್ಟು ಹೊರಟುಹೋದ.

* * * *

ನಾಲ್ಕು ವರ್ಷಗಳು ಕಳೆದುಹೋದುವು. ಆ ನಾಲ್ಕು ವರ್ಷಗಳಲ್ಲಿ ಕ್ಷಣಕ್ಷಣಕ್ಕೂ ನನ್ನ ಸ್ಥಿತಿಯು ರೂಪಾಂತರಗೊಳ್ಳುತ್ತಿದ್ದಿತು. ನನ್ನ ಮಾತು ಕೇಳುವವರು ತೀರಿಹೋದರು. ಅದರಿಂದ ನನ್ನ ಗತಿಯು ಕಾವಲಿಲ್ಲದ ಕೋಟೆಯಂತಾಯಿತು. ಹಸನಾದ ಹೊಲದ ಮುಳ್ಳಿನ ಬೇಲಿಯು ಕಳಚಿ ಬಿದ್ದ ಮೇಲೆ—ಏಳಲಾರದ ಬಡ ಎತ್ತಿಗೂ ಅದರ ಮೇಲೆ ಕಣ್ಣು! ಜೀವನ

ನಿರ್ವಾಹಕ್ಕಾಗಿ ಕಂಡಕಂಡವರನ್ನು ಕಾಮಿಸಿ ಕರೆದೆ. ಮೊತ್ತಮೊದಲು ರಾಣಿಯಂತಹ ರೀತಿಯು ಒದಗಿಬಂದರೂ, ಕಟ್ಟಕಡೆಗೆ ಎಲ್ಲಾ ಘನರೋಗ ಗಳಿಗೂ ಆಸರಾಗಿ, ಬೀದಿಬಳಿಯ ಎಂಜಲ ತಿಪ್ಪೆಗಿಂತಲೂ ಕಡೆಯಾದೆ. ಕ್ರಮೇಣ ವಿಟಪುರುಷರ ಸುಳಿದಾಟವೂ ಕಡಿಮೆಯಾಗತೊಡಗಿತು.

ಸೂಳೆಯ ಸಂಪತ್ತು ಹಿಮದ ಗಡ್ಡೆಯಂತೆ! ಅನುಕೂಲವಾದ ವಾತಾ ವರಣವು ಕಳೆಯಿತೆಂದರೆ ಮತ್ತೆಲ್ಲಿಯದರ ಬದುಕು?

ಹಣಕ್ಕಾಗಿ ದೇಹವನ್ನು ಮಾರಿ ಪ್ರೇಮಶೂನ್ಯವಾದ ಹೃದಯವನ್ನು ಬಿಗಿದಪ್ಪುತ್ತಿರುವಾಗಲೆಲ್ಲಾ — 'ಅವನ' ನೋಟದ ನೆನಪು ಮತ್ತಷ್ಟು ತೀಕ್ಷ್ಣವಾಗಿ ಮಿಂಚುವುದು! ಆದರೆ—ಅಯ್ಯೋ! ಅಂದಿನಿಂದೀಚೆ ಅವನ ನ್ನಾರೂ ಕಂಡವರೇ ಇಲ್ಲವಂತೆ.

* * * *

ಮಳೆಗಾಲದ ಒಂದು ರಾತ್ರಿ. ವಿಟಪುರುಷರ ದಾರಿ ನೋಡುತ್ತ ನಾನು ಕುಳಿತಿದ್ದೆ. ಅಷ್ಟರಲ್ಲಿ ಯಾರೋ ಬಾಗಿಲಬಳಿ ಬಂದರು. ಭವ್ಯ ವಾದ ರೂಪ—ಶ್ರೀಮಂತಿಕೆಯ ಉಡುಪು! ಅಂತಹರನ್ನು ಕನಸಿನಲ್ಲೂ ಕಾಣದೆ ವರ್ಷ ವರ್ಷಗಳು ಕಳೆದಿದ್ದುವು. ಸಂತೋಷದಿಂದೆದ್ದು ನಿಂತು ಮುಂದುವರಿದು ಕೈನೀಡಿದೆ. ಅವರೂ ಅದನ್ನು ಪ್ರೀತಿಯಿಂದ ಗ್ರಹಿಸಿದರು. ನನ್ನ ಪುಣ್ಯ!

ಅವರನ್ನು ಕಂಡಾಗ ತೀರಾ ಹೊಸಬರಂತೆ ತೋರಿತು! ಸ್ಮರಣೆಯು ಎಷ್ಟು ಪುಟಗಳನ್ನು ಮಗುಚಿದರೂ ಅವರ ವಿಷಯವೇ ದೊರೆಯು ಲೊಲ್ಲದು. ಆದರೂ ಸಾಹಸದಿಂದ 'ಬನ್ನಿ, ಈಗಲಾದರೂ ಬಡವಿತಿಯ ಜ್ಞಾಪಕವಾಯಿತಷ್ಟೆ.' ಎಂದು ನುಡಿಸಿತು ನಮ್ಮ ಕುಲವಿದ್ಯೆ!

ಮಹಡಿಯ ಸಜ್ಜೆಮನೆಗೆ ಆದರದಿಂದ ಕರೆದೊಯ್ದೆ! ದೀಪವು ಉರಿಯುತ್ತಿತ್ತು. ಅವರು ನನ್ನ ಹೆಗಲಮೇಲೆ ಕೈಹಾಕಿ ನಸುನಗುತ್ತ ಕೇಳಿದರು—'ನನ್ನ ಗುರುತಿದೆಯೆ?'

. ನಮ್ಮ ಹುಟ್ಟುಗುಣವಾದರೂ — ಅದೇನು ಕಾರಣವೋ — ಆಗ ಮಾತ್ರ ಸುಳ್ಳಾಡಲು ಎದೆಯು ಹಿಂಜರಿಯಿತು. ಆದುದರಿಂದ ವೈಯ್ಯಾರ ದಿಂದ ಕೊರಳು ಕೊಂಕಿಸಿ ಸುಮ್ಮನಿದ್ದೆ.

'ಇಲ್ಲವೆ? ನಾನು ನಿನ್ನ ಅಂದಿನ **ಜಡಭರತ!'**

ನನ್ನ ಎದೆ ನಡುಗಿತು! ಮೊಗವೆತ್ತಿ ನೋಡಿದೆ. ಅಹುದು— ಅದೇ ನೋಟ!

'ನಾನಂದು ಕೇಳಿದಾಗ, ಸೂಳೆಯರಿಗೆ ಬೇಕಾದ ಸಂಪತ್ತೆಂದರೆ ಹಣ ವೆಂದು ಹೇಳಿದ್ದೆ. ಈಗ ನೋಡು! ನಾನು ಮೊದಲಿನ J. B.ಯಲ್ಲ. ಈ ನಾಲ್ಕು ವರ್ಷಗಳಲ್ಲಿ ಬೆವರನ್ನು ನೀರಿಗಿಂತಲೂ ಕಡೆಗಣಿಸಿ ಕೋಡಿ ಹರಿಸಿ ದುಡಿದಿರುವೆನು. ಆದರೂ ನನಗೆ ಬೇಕಾದುದು ನಿನ್ನ ಪ್ರೀತಿ! ಅದಕ್ಕಾಗಿ—' ಎನ್ನುತ ಕಿಸೆಯೊಳಗೆ ಕೈಯಿಕ್ಕಿ ಒಂದು 'ಪೆಕೆಟ'ನ್ನು ತೆಗೆ ದರು. ಅದರೊಳಗಿಂದ ಹೊರ ಹಣಕಿ ಹಾಸ್ಯವಾಡುತ್ತಿದ್ದುವು—ಹತ್ತು 'ನವರಿನು'ಗಳು!

ಆದರೆ—ನನ್ನದೇನು ಈ ಅವಸ್ಥೆ! ಇಂದೇಕೆ ಮನಸ್ಸಿನಲ್ಲಿ ಇಂತಹ ಕಳವಳ?

ಅವರ ಮುಖವನ್ನೇ ನೋಡಿದೆ. ಅದೇ ನೋಟ! ಅದೇ ತೀಕ್ಷ್ಣತೆ— ಮೋಹಕತೆ! ಉತ್ತರಗೊಡಲಾರದೆ ಕ್ಷಣಕಾಲ ಸುಮ್ಮನಿದ್ದೆ.

ಮನಸ್ಸಿನ ಕಳವಳವು ಹೆಚ್ಚಿತು. ದಿವ್ಯ ಜ್ಯೋತಿಯೊಂದು ಮಿಂಚಿ ದಂತಾಯಿತು. ಹೃದಯದ ಮುಸುಕೊಂದು ಕಳಚಿಬಿದ್ದಿತು. ಅದರಿಂದ ಪ್ರೇಮದೊಸರೊಂದು ಕಂಬನಿಯಾಗಿ ಹೊರಹೊಮ್ಮತೊಡಗಿತು.

ಕಣ್ಣೀರು ಸುರಿಸುತ್ತಾ ಅವರ ಕಾಲಿಗೆ ಅಡ್ಡಬಿದ್ದೆ. ಬಿಗಿದುಬರುವ ಕೊರಳಿಂದ ಮೆಲ್ಲನೆ ನುಡಿದೆ — 'ಗುರುದೇವ! ನನ್ನನ್ನು ಕ್ಷಮಿಸು. ನಿನ್ನ ಹೃದಯದ ಸಂಪತ್ತನ್ನು ನಾನಂದು ತಿಳಿಯಲಾರದೆ ಹೋದೆ. ಆದರೆ

ಇನ್ನೇನು ಪ್ರಯೋಜನ? ನಾನಿಂದು ಕಂಡವರ ಪಾಲಿನ ಎಂಜಲ ತಿಪ್ಪೆ! ಆ ಪವಿತ್ರವಾದ ಸಂಪತ್ತನ್ನು ಕೊಳ್ಳುವ ಯೋಗ್ಯತೆ ನನಗಿಂದಿಲ್ಲ. ಕ್ಷಮಿಸು!' ಎಂದು ಗೋಳೆಂದು ಅತ್ತುಬಿಟ್ಟೆ!

ದಿಢೀರೆಂದು ಮಳೆಯು ಸುರಿಯತೊಡಗಿತು. ಬಿರುಗಾಳಿಯು ಬೀಸಿ ದೀಪವು ನಂದಿಹೋಯಿತು. ಆ ಕಗ್ಗತ್ತಲೆಯಲ್ಲಿ—ಪ್ರಕೃತಿಯ ಕ್ಷುಬ್ಧ ವಾತಾವರಣದಲ್ಲಿ ಆಂತರಿಕ ಮನೋಭಾವದ ಮೂರ್ಛನೆಯೊಂದು ಹೊರ ಹಬ್ಬಿ ದಿಕ್ಕುದಿಕ್ಕುಗಳಲ್ಲೂ ಪ್ರತಿಧ್ವನಿಸತೊಡಗಿತು!

ಬೆಳಕು ಹರಡಿದ್ದಾಗ ಕಾಣುವ ಬಯಕೆ ಮೂಡಲಿಲ್ಲ. ಬಯಕೆಯು ಮೂಡಿ ಹೃದಯವು ಹಾತೊರೆದಾಗ—

ಸುತ್ತಲೂ ಕಗ್ಗತ್ತಲೆ!



*

# ಪ್ರತೀಕ್ಷೆ

ಶ್ರೀಮತಿ ಸರಸ್ವತೀ ಬಾಯಿ ರಾಜವಾಡೆಯವರು

★

ಇವರು ಮೊದಲು ಮೊದಲು 'ಗಿರಿಬಾಲೆ' ಎಂಬ ಕಾವ್ಯನಾಮದಿಂದ ಅನೇಕ ಕತೆಗಳನ್ನು 'ಕಂಠೀರವ'ದಲ್ಲಿ ಬರೆದಿದ್ದಾರೆ. 'ಆಹುತಿ ಇತ್ಯಾದಿ ಕತೆಗಳು' ಎಂಬ ತನ್ನದೊಂದು ಸ್ವತಂತ್ರ ಕಥಾಸಂಗ್ರಹವನ್ನು ಪ್ರಕಟಿಸಿದ್ದಾರೆ ಪತ್ರಿಕೆಗಳಲ್ಲಿ ಇವರ ಅನೇಕ ಕತೆ—ಲೇಖನಗಳು ಅಚ್ಚಾಗಿವೆ. ಕತೆ ಬರೆಯುವಾಗ ತಾನಿಟ್ಟು ಕೊಂಡ ಗುರಿಯ ಕಡೆ ತಡೆಯಿಲ್ಲದೆ ಸಾಗುವ ಶಕ್ತಿ ಇವರಿಗೆ ಸಿದ್ಧಿಸಿದೆ. ಹೆಂಗುಸಿನ ಹೃದಯದ ಸುಖ-ದುಃಖಗಳನ್ನು ಚೆನ್ನಾಗಿ ಚಿತ್ರಿಸಬಲ್ಲರು. ಶೈಲಿಯಲ್ಲಿ ಶಯ್ಯಾಗುಣವಿದೆ.

ಆ ಅತ್ತೆ ಸೊಸೆಯರು ತಾಯಿ ಮಗಳಂತೆ ಹೊಂದಿಕೊಂಡಿದ್ದರು. ಕಾರಣವೂ ಇತ್ತು. ಊರಿಗೆ ಊರೇ ಕಮಲಮ್ಮನವರನ್ನು ತಾಯಿಯೆಂದು ಕೊಂಡಾಡುತ್ತಿರುವಾಗ ಒಬ್ಬನೇ ಒಬ್ಬನಾದ ಮುದ್ದುಮಗನ ಪತ್ನಿ ಶಾರದೆಯು ಬೇರೆ, ಮಗಳು ಕಾಮುವು ಬೇರೆಂದು ಅವರು ತಿಳಿಯುವರಾದರೂ ಹೇಗೆ? ಕಾಮುವು ಪತಿಗೃಹಕ್ಕೆ ತೆರಳಿದ ಕೆಲವೇ ದಿನಗಳಲ್ಲಿ ಶಾರದೆಯ ಗೃಹಪ್ರವೇಶವಾಗಿತ್ತು. ಕಮಲಮ್ಮನವರ ವಾತ್ಸಲ್ಯದ ಬಳ್ಳಿಯ ಆಧಾರದ ಒಂದು ಟೊಂಗೆಯಂತಿದ್ದ ಕಾಮುವು ಹೊರಟುಹೋದಾಗ ಅಸ್ತವ್ಯಸ್ತವಾಗಿ ಹರಡಿದ್ದ ಆ ಬಳ್ಳಿಗೆ ಕ್ಷಿಪ್ರದಲ್ಲೇ ಆಧಾರವು ದೊರಕಿದಂತಾಗಿ ನವಚೇತನದಿಂದದು ಚಿಗುರಿ, ಬೆಳೆದು, ಪುಷ್ಪವನ್ನು ಬಿಡುವ ಸಮಯವೂ ಒದಗಿ ಬಂದಿತ್ತು. ಆದರೆ, ಆ ಬಳ್ಳಿಯು ಅರಳಲಿಲ್ಲ. ಅನಿರೀಕ್ಷಿತವಾಗಿ ಅವರ ಮಗ ರಾಮಚಂದ್ರನಿಗೆ ದೂರದೇಶಕ್ಕೆ ಹೋಗಬೇಕಾಗಿ ಬಂತು. ಯಾವುದೋ ಒಂದು ಸಂಸ್ಥೆಯ ಪ್ರತಿನಿಧಿಯಾಗಿ ಅವನು ಅಲ್ಲಿ ದುಡಿಯುತ್ತಿದ್ದ. ವರ್ಷಕ್ಕೆ ಒಂದೆರಡು ಬಾರಿ—ದೊಡ್ಡ ಹಬ್ಬಗಳ ರಜಾದಿನಗಳಲ್ಲಿ ಮಾತ್ರ ಅವನಿಗೆ ಬರಲು ಅವಕಾಶವಾಗುತ್ತಿತ್ತು.

ಶಾರದೆಯು ರಾಮಚಂದ್ರನ ವಧುವಾಗಿ ಇನ್ನೂ ಎರಡು ವರ್ಷಗಳು ಕಳೆದಿರಲಿಲ್ಲ. ಆ ಅವಧಿಯಲ್ಲೆಲ್ಲಾ ಅವರಿಬ್ಬರ ಭೇಟಿಯು ಕೇವಲ ಹತ್ತೆಂಟು ಬಾರಿಯಾಗಿರಬಹುದಷ್ಟೆ. ಆದರೇನು? ಪ್ರಪಂಚದ ಹಳೆಯ ದಂಪತಿಗಳಿಗಿಂತ ಹೆಚ್ಚಾಗಿ ಅವರಿಬ್ಬರು ತಮ್ಮನ್ನು ತಾವು ಅರಿತುಕೊಂಡಿದ್ದರು. ಕಲ್ಪನೆಗೂ ಮೀರಿದ ಆದರ್ಶಪ್ರೇಮಿಗಳಾಗಿದ್ದರವರು. ಅಗಲಿಕೆಯು ಆ ಪ್ರೇಮಪಾಶಕ್ಕೆ ಬ್ರಹ್ಮಗಂಟನ್ನೇ ಬಿಗಿದಿತ್ತು.

ಯುಗಾದಿಯ ಮುಂಚಿನ ದಿನ ದೀಪ ಹಚ್ಚುವ ಸಮಯವಾಗುತ್ತ ಬಂದಿತ್ತು. ಬೀದಿಯ ಕಂಬಗಳು ಅದಾಗಲೇ ಉರಿಯತೊಡಗಿದ್ದುವು. ಶಾರದೆಯು ತಲೆಬಾಗಿಲಲ್ಲಿ ನಿಂತು ಎವೆಯಿಕ್ಕದೆ ದಾರಿಯನ್ನು ನೋಡುತ್ತಿದ್ದಳು. ಮುಖವು ಕಂದಿಹೋಗಿತ್ತು; ಆದರೂ ಕಣ್ಣುಗಳು ನಿಸ್ತೇಜವಾಗಿರಲಿಲ್ಲ. ಸಂಧ್ಯಾನಿಶಿಯರಲ್ಲಿ ಸಂಧಾನವಮಾಡಲು ಹೆಣಗಾಡುತ್ತಿದ್ದ ಸಮೀರನ ಓಡಾಟದಿಂದಾಗಿ ಅವಳ ಮುಂಗುರುಳು ಅಸ್ತವ್ಯಸ್ತವಾಗಿದ್ದರೂ, ಸೆರಗು ಸ್ಥಳಾಂತರವಾಗಿದ್ದರೂ ಅವಳ ಲಕ್ಷ್ಯವು ಅತ್ತ ತಿರುಗಲಿಲ್ಲ. ಹೊತ್ತೇರುತ್ತಿದ್ದಂತೆ ಹೆಜ್ಜೆಗಳನ್ನು ಮುಂದಿಕ್ಕಿ ಅವಳು ಕೂಡಿದಷ್ಟು ದೂರಕ್ಕೆ ದೃಷ್ಟಿಯನ್ನು ಹೊರಳಿಸುತ್ತಿದ್ದಳು. ಕಮಲಮ್ಮನವರು ಚಾವಡಿಯಲ್ಲಿ ಬತ್ತಿ ಹೊಸೆಯುತ್ತಿದ್ದರು. ಕತ್ತಲಾದುದರಿಂದ ಹತ್ತಿಯನ್ನು ಬುಟ್ಟಿಗೆ ತುಂಬಿಸಿ ತಲೆಬಾಗಿಲತ್ತ ನೋಡಿದರು. ಶಾರದೆಯು ಮಂತ್ರಮುಗ್ಧ ಸ್ಥಿತಿಯಲ್ಲಿದ್ದುದನ್ನು ಕಂಡು ನಸು ನಕ್ಕು ತನ್ನೊಳಗೆ, 'ಹುಚ್ಚು ಹುಡುಗಿ; ಎಷ್ಟೊಂದು ಆತುರ! ಹೊತ್ತಿನ ಪರಿವೆಯೋ ಬೇಡವೆ?' ಎನ್ನುತ್ತ ಕೆಮ್ಮಿದರು. ಶಾರದೆಯು ಅಲುಗದಿರಲು ಮೆಲ್ಲನೆ ತಾನೂ ಅವಳ ಬಳಿಗೆ ಹೋಗಿ ಅವಳ ಸೆರಗನ್ನು ಸರಿಪಡಿಸಿ, 'ಬರುತ್ತಿರುವನೇನಮ್ಮಾ?' ಎಂದು ಕೇಳಿದರು. ಅಷ್ಟೆ, ಶಾರದೆಗೆ ಅದೇಕೋ ದುಃಖವು ಉಕ್ಕಿ ಬಂತು. ನಡುಗುವ ಧ್ವನಿಯಲ್ಲಿ, 'ಅತ್ತೆ, ಇಂದೇಕೆ ಹೀಗೆ?' ಎಂದಳು. ಮುಂದೆ ಮಾತಾಡಲಾಗಲಿಲ್ಲ. ಕಣ್ಣೀರು ಕೋಡಿ ಹರಿಯಿತು. 'ಅಯ್ಯೋ ಹುಚ್ಚಿ, ಏನಿದು ತ್ರಿಸಂಧ್ಯೆಯಲ್ಲಿ ಅವಲಕ್ಷಣವಾಗಿ ಅಳುವುದೇಕೆ? ಹಾಗೆ ನಿಘಂಟಾದ ಸಮಯಕ್ಕೆ ಬರಲು ಅವನೇನು ಯಂತ್ರವೆ? ಏನೋ, ಸ್ವಲ್ಪ ಸಾವಕಾಶವಾಗಿರಬಹುದು—ನೀನು ಒಳಕ್ಕೆ ನಡೆ. ಅವನು ಬರುವ ಹೊತ್ತಿಗೆ ಇದೆಂಥ ನಿನ್ನ ವೇಷ!' ಎಂದರವರು ಬೇಸರದಿಂದ. ಅವಳ ಮೇಲಿನದಲ್ಲ—ಅವಳ ಅವಸ್ಥೆಯ ಮೇಲಿನ ಬೇಸರದಿಂದ.

ಶಾರದೆಗೆ ಹೌದೆನಿಸಿತು. ತಟ್ಟನೆ ಮನೆಯೊಳಹೊಕ್ಕು ದೀಪವನ್ನುರಿಸಿ ಕೈಮುಗಿದಳು. ಹಾಗೆಯೇ ಬಾವಿಗೆ ಹೋಗಿ ಕೈಕಾಲು ತೊಳೆದು, ದೇವರ ಕೋಣೆಯಲ್ಲಿ ನಂದಾದೀಪಕ್ಕೆ ಎಣ್ಣೆಯನ್ನೆರೆದು ಬತ್ತಿಯನ್ನು ಮುಂದುಮಾಡಿದಳು. ವಿಲಕ್ಷಣ ಭಾವನೆಯೊಂದು ಅವಳ ಹೃದಯದಲ್ಲಿ ಮೂಡಿತು. ಮೂಕವಾಣಿಯಿಂದ ದೇವರನ್ನು ಸ್ತುತಿಸಿ ನಮಸ್ಕರಿಸಿದಳು. ತುಲಸಿಗೆ

ದೀವಿಗೆಯನ್ನಿಟ್ಟು ನಿಯಮದಂತೆ ಅತ್ತೆಯ ಕಾಲು ಹಿಡಿದು ತನ್ನ ಕೋಣೆಯನ್ನು ಸೇರಿ ಕದವಿಕ್ಕಿಕೊಂಡಳು. ಅವಳ ಮೈಯೆಲ್ಲ ಬೆವತುಬಿಟ್ಟಿತು. ಸದ್ದಿಲ್ಲದೆ ಹಾಸಿಗೆಯನ್ನು ಮಂಚಕ್ಕೆ ಹೊಂದಿಸಿ ಬಿಡಿಸಿದಳು. ಹೊಸ ಬಟ್ಟೆಯನ್ನದಕ್ಕೆ ಹೊದೆದಳು. ತಾನೇ ಬಿಡಿಸಿದ ಕಸೂತಿಯ ಚೀಲಗಳಲ್ಲಿ ದಿಂಬುಗಳನ್ನು ತುಂಬಿ ಹಾಸಿಗೆಗೆ ಜೋಡಿಸಿಟ್ಟಳು. ಮಧ್ಯಾಹ್ನವೇ ಅಲಂಕರಿಸಿಟ್ಟ ಹೂದಾನಿಯನ್ನು ಯೋಗ್ಯ ಸ್ಥಳದಲ್ಲಿಟ್ಟಳು. ಮತ್ತೇನಲ್ಲ ಮಾಡಬೇಕೆಂದು ತೋರಿತೋ ಅದನ್ನೆಲ್ಲ ಮಾಡಿ ತೃಪ್ತಿಗೊಂಡು ಕೋಣೆಯನ್ನು ಬಿಟ್ಟು ಹೊರಬಂದು ಬಾಗಿಲನ್ನೆಳೆದುಕೊಂಡಳು.

* * * *

ರಾತ್ರಿಯೂಟದ ಹೊತ್ತು ಪಿರಾರಿ ಘಂಟೆ ಎರಡಾಗಿತ್ತು. ಶಾರದೆಯ ಮುಖವು ಸೀರಿಸಿದ ಕಿತ್ತಿನೆದ ಕುಮುದದಂತೆ ಬಾಡಿ ನಿಸ್ತೇಜವಾಗಿ ಹೋಯಿತು — ಹಸಿವಿನಿಂದಲ್ಲ, ಅಷ್ಟು ಹೊತ್ತಿಗೂ ರಾಮಚಂದ್ರನ ಸುಳಿವಿಲ್ಲದಿದ್ದುದರಿಂದ. ಇಷ್ಟರ ವರೆಗೆ ಅವಳ ಕಣ್ಣುಗಳಲ್ಲಿ ಜ್ವಲಿಸುತ್ತಿದ್ದ ಆಸೆಯ ಆ ಬೆಳಕು 'ಇದೀಗ ನಂದಿಹೋಯಿತು. ಬದಲು, ಅವುಗಳು ಹನಿಯತೊಡಗಿದುವು. ನಿರಾಶೆ, ಕ್ರೋಧ, ದುಃಖ ಇವುಗಳು ಒಂದರ ಮೇಲೊಂದಾಗಿ ಅವಳನ್ನಾವರಿಸಿ ಸಂಕಟಪಡಿಸಿದುವು. ಇಂದಂತೂ ಬರಲಾರ — ಅದು ಖಚಿತವಾಗಿತ್ತವಳಿಗೆ. ಆದರೂ ಹುಚ್ಚು ಮನಸ್ಸು ಏನನ್ನೋ ಹೇಳುತ್ತಲಿತ್ತು. 'ಹಾಗಾದರೆ, ಅವರು ಮಾತಿಗೆ ತಪ್ಪುವರೆ? ನನ್ನನ್ನು ಅಗಲಿದಂದು ಹೇಳಿದ ಮಾತು, ಇನ್ನೂ ಕಿವಿಯ ಬಳಿಯಲ್ಲೇ ಪ್ರತಿಧ್ವನಿಸುತ್ತಲಿದೆಯಲ್ಲ! 'ನಿನ್ನ ಕೊರಳಾಣೆ, ಇದೇ ರೀತಿ ಹೊಸ ಹಬ್ಬದ ಸಂಕ್ರಾಂತಿಯ ರಾತ್ರಿಯಲ್ಲಿ ನಾವಿಬ್ಬರೂ ಇದೇ ಕೋಣೆಯಲ್ಲಿರುವೆವೆಂದು ತಿಳಿ'— ಎಂದು ಸಾರಿ ಸಾರಿ ಹೇಳಿದ್ದರಲ್ಲ, ಅದೇನು ಮರೆತುಹೋಗಿರಬಹುದೆ? ಛೆ! ಹಾಗಿದ್ದರೆ ಮೊನ್ನೆ ಬಂದ ಪತ್ರದಲ್ಲಿ ಮತ್ತೂ ಬರೆದಿದ್ದರಲ್ಲ ಅದನ್ನ! 'ಹೇಳಿದಂತೆ ಮಾಡಬೇಕಂದೇನು!' ಎಂದು ಉದಾಸೀನರಾಗಿರಬಹುದೆ? ಅಯ್ಯೋ, ನಾನೆಂತಹ ಪಾಪವನ್ನು ಕಟ್ಟಿಕೊಳ್ಳುತ್ತಿರುವೆನು! ನನ್ನ ನಿರ್ಬಲ ಮನಸ್ಸು ಅವರಲ್ಲೂ ತಪ್ಪನ್ನು ಹುಡುಕಲು ಧೈರ್ಯಗೊಳ್ಳಬೇಕೆ? ಅವರಾವ ಮಾತಿಗೆ ತಪ್ಪಿರುವರು? ಕಾರ್ಯ-ಬಾಹುಳ್ಯದ ದೆಸೆಯಿಂದ ಹಿಂದೊಮ್ಮೆ ರಜೆಯು ದೊರಕದಿರಲು ಕಾಯಿಲೆಯ ನೋಗು

ಹಾಗೆ ಪ್ರಕೃತಿಯನ್ನು ಸುಧಾರಿಸಿಕೊಳ್ಳುವ ನವದಿಂದ ನನ್ನನ್ನು ನೋಡ ಬಂದಿದ್ದರಲ್ಲ—ಏಕೆಂದು? ಆವರೆ ಇಂದು ಇದೇಕೆ ಹೀಗೆ?'

ಶಾರದೆಯ ತಲೆಯಲ್ಲಿ ಮೇಲಿನ ವಿಚಾರಗಳ ದೊಂಬಿಯೆದ್ದಿತ್ತು. ದೀಪವನ್ನು ಸಣ್ಣದಾಗಿಟ್ಟು ಚಾವಡಿಯ ಕಂಬಕ್ಕೊರಗಿ ಅವಳು ಕುಳಿತಿದ್ದಳು. ಕಮಲಮ್ಮನವರು ಬಾವಿಕಟ್ಟೆಯಲ್ಲಿ ಏನೋ ಕೆಲಸದಲ್ಲಿದ್ದವರು ಅಡಿಗೆಕೋಣೆಯನ್ನು ಹೊಕ್ಕಾಗ ಶಾರದೆಯನ್ನು ಕರೆದು ಹೇಳಿದರು 'ಅಮ್ಮಾ ಶಾರದಾ, ಅಡಿಗೆಯೆಲ್ಲಾ ಹಾಳಾಗಿ ಹೋಯಿತು. ಒಂದು ಬಾಯಿ ಉಂಡು ನಿನ್ನ ಮಲಗಿಕೋ. ನಾಣ ಬರದೆ ಎಲ್ಲಿಗೆ ಹೋಗುತ್ತಾನೆ? ರಾತ್ರಿಯೆಲ್ಲ ಹೀಗೆ ಕೂತರೂ ಇಂದು ಬೇರೆ ಅವನು ಬರುವುದೆಂದರೆ ನಿನ್ನ ಒಳ್ಳೇ ದಿನದಲ್ಲಿ ಕದನ್ನ ತಿನ್ನುವುದೂ ಪ್ರಾಪ್ತಿಯೆ?'

'ಇಂದು ಬರುವುದೆಂದರೆ ನಿನ್ನ' ಇಷ್ಟೇ ಅವಳಿಗೆ ಕೇಳಿಸಿತು. ಶಾರದೆಯು ಬಿಕ್ಕಿ ಬಿಕ್ಕಿ ಅಳತೊಡಗಿದಳು 'ಅತ್ತೆ, ಇವತ್ತಿನ ದಿನ ದಯಮಾಡಿ ನನ್ನಲ್ಲಿ ಬೇಸರಪಡಬಾರದು. ಅವರಿಗೆಂದು ಮಾಡಿದ ಅಡಿಗೆ ಅವರೊಂದಿಗೆ ಉಂಡರೆ ಉಂಟು. ಇಲ್ಲದಿದ್ದರೆ ಹಾಗೆಯೇ ಉಳಿಯಲಿ. ಅಥವಾ ಹಸಿವಾದಾಗ ನಾನೇ ಊಟಮಾಡುತ್ತೇನೆ. ಘಂಟೆ ಹತ್ತಾಗಿರಬೇಕು. ನೀವಿನ್ನು ಮಲಗಬಹುದಲ್ಲ. ನಾನ್ ಹೇಗೂ ಬೇಗ ಏಳಲಿಕ್ಕಿದೆ.'

ಕಮಲಮ್ಮನವರು ಪಾತ್ರಪರಡಿಗಳನ್ನು ಓರಣವಾಗಿಡುತ್ತಿದ್ದವರು ತಟ್ಟನೆ ತಿರುಗಿ ಸೊಸೆಯನ್ನು ನೋಡಿದರು. ನಿಟ್ಟುಸಿರೊಂದು ಅನಾಯಾಸವಾಗಿ ಹೊರಟು ಹೋಯಿತು. ಅದರೊಂದಿಗೆ ನಾನಾ ವಿಚಾರಗಳು ಮನಸ್ಸಿನಲ್ಲಿ ಹೊಳೆದುವು. ನಾನಾ ದೃಶ್ಯಗಳು ಅಂತರ್ಲೋಚನದ ಮುಂದೆ ಹಾದು ಹೋದುವು. ಅವರೆಂದರು 'ನನಗೇನಮ್ಮ! ನಮ್ಮನ ಯಾಕೆ ಕೊರಗುತ್ತೀಯೆಂದು ಹೇಳುವೆನಷ್ಟೆ. ನಿನ್ನ ಮನಸ್ಸಿಗೆ ಹಿತಕಂಡಂತೆ ಮಾಡು. ಮರುಳು ಬುದ್ಧಿಗೆ ಹಿತ-ಮಿತವುಂಟೆ?'

'ಅವರು ನಿಜವಾಗಿ ಇಂದು ಬರುವುದಾಗಿ ಹೇಳಿದ್ದಾರೆ ಅತ್ತೆ. ಮೊನ್ನೆಯ ಕಾಗದದಲ್ಲಿ ಕೂಡ 'ರಾತ್ರಿಯೂಟ ನಿನ್ನ ಅಡಿಗೆಯದು' ಎಂದಿದ್ದಾರೆ. ಬಲವಾದ ಕಾರಣವಿಲ್ಲದ ಹಾಗೆ ತಪ್ಪುವವರಲ್ಲ. ಏನಾಯಿತೋ ಅವರಿಗೆ ಎಂದು ಕಳವಳವಾಗುತ್ತಿದೆ ಅಷ್ಟು. ನೀವೀಗ ಮಲಗುತ್ತೀರಾ?'

ತನ್ನನ್ನು ತನ್ನಷ್ಟಕ್ಕೆ ಬಿಟ್ಟರೆ ಸಾಕು ಎಂಬಾಶಯದಿಂದ ಶಾರದೆಯು, ಮಲಗಬಹುದೆಂದು ಪುನಃ ಅತ್ತೆಗೆ ಸೂಚಿಸಿದಳು. ಕಮಲಮ್ಮನವರು ಮತ್ತೆ ಮಾತೆತ್ತಲಿಲ್ಲ. 'ಹರಿ! ಕೃಷ್ಣ!' ಎನ್ನುತ್ತ ಪಡಸಾಲೆಯಲ್ಲಿ ಅಡ್ಡಾದರು.

* * * *

ಹೊತ್ತು ಸಾಗುತ್ತಲೇ ಇತ್ತು. ಪ್ರಕೃತಿಯು ಗಂಭೀರ ಶಾಂತತೆಯಿಂದ ಕೂಡಿತ್ತು. ಶಾರದೆಯು ಮೈಯೆಲ್ಲಾ ಕಿವಿಯಾಗಿರಿಸಿಕೊಂಡು ಸೂಕ್ಷ್ಮಕ್ಕಿಂತ ಸೂಕ್ಷ್ಮ ಶಬ್ದಗಳನ್ನೂ ಆಲಿಸುತ್ತ ಕುಳಿತಳು. ಬೀದಿನಾಯಿಗಳ ಕೂಗಾಟ, ತರಗೆಲೆಗಳ ಶಬ್ದ, ತೆಂಗಿನ ಗರಿಗಳ ತಿಕ್ಕಾಟ, ಚಾವಡಿಯಲ್ಲಿದ್ದ ಗಡಿಯಾರದ ಟಿಕ್ ಟಿಕ್, ಆಗಿಂದಾಗ ಆಸುಪಾಸು ಮನೆಗಳ ಘಂಟೆಯು ಹೊಡತದೊಂದಿಗೆ ಚಾವಡಿ ಗಡಿಯಾರದ ಸ್ವರ—ಇವುಗಳ ಹೊರತು ಕಾಲಸಪ್ಪಳವೇನೂ ಅವಳಿಗೆ ಕೇಳಿಸಲಿಲ್ಲ. ನಡುನಡುವೆ ಕಮಲಮ್ಮನವರು ಎಚ್ಚತ್ತು, 'ಮಲಗಿದೆಯಮ್ಮಾ ಶಾರದಾ?' ಎಂದು ಕೇಳುವಾಗ ಬೆಚ್ಚಿಬೀಳುತ್ತಿದ್ದಳು. ಸಮಯವಾಯಿತು. ಒಮ್ಮೆಗೆ ನಾಲ್ಕಾರು ಘಡಿಯಾರಗಳು ಹನ್ನೆರಡನ್ನು ಹೊಡೆದು ಸುಮ್ಮನಾದುವು. ಪಡಸಾಲೆಯಲ್ಲಿ ಕಮಲಮ್ಮನವರು ಮೈಮರೆತು ಬಿಡುವ ಶ್ವಾಸವು ಸ್ಪಷ್ಟವಾಗಿ ಕೇಳಿಸತೊಡಗಿತು. ನಟ್ಟಿರುಳು. ಇಡೀ ಬೀದಿಯಲ್ಲೇ ಎಲ್ಲರೂ ನಿದ್ರೆ ಹೋಗಿದ್ದಾರೆ. ಶಾರದೆಗೆ ನಿದ್ದೆ ಬರಲೊಲ್ಲದಾದರೂ ಕೂತು ಮೈ ನೋವೇಳತೊಡಗಿತು. ಚಾವಡಿಯ ಸರಳುಬಾಗಿಲು ಭದ್ರವಾಗಿದೆಯೇ ಎಂಬುದನ್ನು ನೋಡಿ, ನೆಲದಲ್ಲೇ ಮಲಗಿದಳು. ಆದರೆ ಪಂಚೇಂದ್ರಿಯಗಳೂ ಉದ್ವಿಗ್ನಗೊಂಡಿದ್ದುವು. ತೆರೆದ ಕಣ್ಣುಗಳಿಗೆ ಇಣಿಕಿ ಇಣಿಕಿ ಹೆಬ್ಬಾಗಿಲನ್ನು ನೋಡುವುದೇ ವ್ರತವಾಗಿತ್ತು. ಇದೇನು! ಯಾರಾದರೂ ಬಾಗಿಲನ್ನು ತಟ್ಟುತ್ತಿರುವರೇ? ಮತ್ತೇಕೆ ಶಾರದೆಯು ತಟ್ಟನೆ ಎದ್ದು ನಿಂತಳು? ಹೌದು. ಮತ್ತೆ ಮತ್ತೆ ಮೆಲ್ಲಗೆ ಬಾಗಿಲ ಚಿಲುಕ ಅಲುಗಿದ ಶಬ್ದ. ಶಾರದೆಯು ನಡುಗುವ ಕೈಯಿಂದ ಚಾವಡಿಯ ಬಾಗಿಲನ್ನು ತೆರೆದು ಕೈದೀವಿಗೆಯೊಂದಿಗೆ ಅಂಗಳಕ್ಕಿಳಿದಳು. ಕಾಲುಗಳೇಕೋ ತಾಕಲಾಡತೊಡಗಿದುವು. ಹೃದಯವು ಉಬ್ಬಿಬಿಟ್ಟಿತ್ತು. ಹೆಬ್ಬಾಗಿಲ ಬಳಿ ನಿಂತು ಮೆಲ್ಲಗೆ ಕೇಳಿದಳು: 'ಯಾರು?'

'ಗೊತ್ತಿಲ್ಲವೆ ಶಾರದಾ? ಮತ್ತಾರು? ನಾನೆ!' ಪ್ರತ್ಯುತ್ತರ. ಶಾರದೆಯ ಹೃದಯದಲ್ಲಿ ಆನಂದ ತಾಂಡವವಾಡಿತು. ಮಿಂಚಿನ ವೇಗದಿಂದ ಅಗುಳಿ

ಯನ್ನು ತೆಗೆದಳವಳು. ಆಗಂತುಕನು ನಿಜವಾಗಿಯೂ ಅವಳ ಜೀವನ ಸರ್ವಸ್ವವಾಗಿದ್ದ. ಬಾಗಿಲನ್ನು ಭದ್ರಪಡಿಸುತ್ತ ಮೃದುವಾಗಿ ಶಾರದೆ ಯೆಂದಳು: 'ನಿಜವಾಗಿಯೂ ನೀವು ಬರುತ್ತೀರೆಂದೇ ನನ್ನಾತ್ಮವು ಹೇಳು ತ್ತಿತ್ತು. ಆದರೆ, ಎಂದೂ ಇಲ್ಲದಂತೆ ಈ ಅಪರ ರಾತ್ರಿಯಲ್ಲಿ ಬರುವಂ ತಾದುದೇನೊ!' 'ಒಳಕ್ಕೆ ನಡೆ; ಅಲ್ಲಿ ಮಾತಾಡೋಣ' ರಾಮಚಂದ್ರನೆಂದ.

'ಸಾಮಾನು ಪೆಟ್ಟಿಗೆಗಳೇನೂ ಇಲ್ಲವೇಕೆ?'

'ಅದೆಲ್ಲ ಹಿಂದಿನಿಂದ ಬರಲಿದೆ. ನಿನ್ನನ್ನು ನೋಡುವ ವರೆಗೆ ಆತುರ ವಾಗಿತ್ತು—ಓಡಿಯೋಡಿಯೂ ಬಂದುಬಿಟ್ಟೆ ಶಾರದಾ. ಅದಿರಲಿ. ಈಗ ನೀನು ಗಲಾಟೆ ಹಚ್ಚಬಾರದು. ನನಗೆ ಬಾಯಾರಿದೆ. ಒಂದು ತಟ್ಟೆ ತಣ್ಣೀರು ಕೊಡು. ಮತ್ತೇನೂ ಬೇಡ.'

'ನಿಮ್ಮ ಊಟ . ಹಾಲು . '

'ಅದೆಲ್ಲ ಮುಗಿಯಿತು. ಇನ್ನು ಒತ್ತಾಯ ಬೇಡ.'

'ಅತ್ತೆಯವರನ್ನೆಬ್ಬಿಸಿ ಬರುತ್ತೇನೆ.'

'ನಾನು ಹೇಳಿದೆನಲ್ಲ—ಗಲಾಟೆ ಬೇಡವೆಂದು. ಆಕೆಯು ಮಲಗಿ ದ್ದಾಳೆ. ಪಾಪ, ವೃಥಾ ನಿದ್ದೆಯನ್ನು ಯಾಕೆ ಕೆಡಿಸುತ್ತೀ?'

'ಇಂದೆಲ್ಲಾ ವಿಚಿತ್ರ. ಇಲ್ಲದಿದ್ದರೆ ಒಳಕ್ಕೆ ಕಾಲಿಡುವ ಮೊದಲು 'ಅಮ್ಮ' ಬೇಕು. ಎಬ್ಬಿಸದಿದ್ದರೆ ಚೆಂದವೆ?'

'ಸಂದರ್ಭವೆಂತಹದೆಂದು ಗೊತ್ತಿಲ್ಲವೆ ಶಾರದಾ? ನಾನು ಜೀವ ಹಿಡಿದು ಈ ಅವೇಳೆಯಲ್ಲಿ ಬಂದುದು ನಿನಗೆ ಕೊಟ್ಟ ಮಾತನ್ನು ನಡೆಸ ಬೇಕೆಂದು. ಇಂದಿನ ದಿನ ಇನ್ನು ಸ್ವಲ್ಪವೇ ಹೊತ್ತಿದೆ ನೀರೆಲ್ಲಿ?'

ಶಾರದೆಯು ಲಗುಬಗೆಯಿಂದ ಪತಿಯನ್ನು ಕೋಣೆಗೆ ಕರೆದುಕೊಂಡು ಹೋದಳು. ಕೂಜೆಯ ನೀರನ್ನು ಲೋಟೆಯಲ್ಲಿ ಬಗ್ಗಿಸಿ ಕೊಟ್ಟಳು. ರಾಮಚಂದ್ರನು ಅವಳಲ್ಲೇ ನೆಟ್ಟ ದೃಷ್ಟಿಯುಳ್ಳವನಾಗಿದ್ದ.

'ಎಷ್ಟೊಂದು ಕಷ್ಟಪಟ್ಟೆ ಶಾರದಾ ನಿನಗಾಗಿ! ಬಾ, ಒಮ್ಮೆ ನನ್ನ ಹೃದಯವನ್ನಾತುಕೋ. ನೀರಿನಿಂದ ತಣಿಯದದು ನೋಡಿದೆಯಾ. ನನ್ನ ಮಾತು ಸುಳ್ಳಾಯಿತೆ ಎಷ್ಟೇ ತೊಂದರೆಯಾದರೂ? ನಾಳೆ ಹೊಸ ವರ್ಷ

ಪ್ರಾರಂಭವಾಗುತ್ತಿದೆ ಶಾರದಾ. ನಿನ್ನಾಣೆ; ನಾನೆಷ್ಟು ಆಸೆಪಟ್ಟೆ—ನೀನು ಹೊಸ ಸೀರೆಯನ್ನುಟ್ಟು ದೇವರೊಳಗೆ ಹೋಗುವುದನ್ನು ದೂರದಿಂದ ನೋಡಬೇಕೆಂದು! ಆದರೆ ದೈವಚಿತ್ತ ಬೇರೆ. ನಿನಗಾಗಿ ಹುಡುಕಿ ಹುಡುಕಿ ಹೊಸ ಮಾದರಿಯ ಎರಡು ಸೀರೆಗಳನ್ನು — ಅವುಗಳ ಹೊಂದಿಕೆಯ ಕುಪ್ಪಸಗಳನ್ನು ಕೂಡ—ತೆಗೆದಿದ್ದೆ. ಆದರೆ ಕಾರಣಾಂತರದಿಂದ ನನ್ನಿಂದ ತರಲಾಗಲಿಲ್ಲ ಶಾರದಾ! ಕ್ಷಮಿಸುವೆಯಲ್ಲವೆ?'

'ಹಬ್ಬದಲ್ಲಿ ನನಗೆ ನಿಮಗಿಂತ ಬೇರೆ ಉಡುಗೊರೆ ಹೆಚ್ಚೆಂದು ಊಹಿಸ ಲಾದರೂ ನಿಮ್ಮಿಂದ ಹೇಗಾಯಿತು?' ಶಾರದೆಯು ಪತಿಯ ಮುಖವನ್ನು ಅಭಿಮಾನದಿಂದ ನೋಡಿದಳು. ಅವನು ನಸುನಕ್ಕನು. ಆದರೆ ಅದೇಕೋ ತತ್‌ಕ್ಷಣವೇ ಅವನ ಮುಖವು ವಿವರ್ಣವಾಯಿತು. ಅವನು ನಿಟ್ಟುಸಿರೆಳೆ ಯುತ್ತಾ, 'ಶಾರದಾ, ಏನಾದರೇನು—ನಾವು ಶೀಘ್ರ—ಅತಿ ಶೀಘ್ರದಲ್ಲೇ ಅಗಲಬೇಕಾಗಿದೆಯಲ್ಲ?' ಎಂದ. ದನಿಯು ನಡುಗುತ್ತಿತ್ತು.

'ಇಂದಿನ ದಿನ ನಮ್ಮದು. ನಾಳೆಯ ಕೊರಗಿನ ಹಂಬಲ ಈಗೇಕೆ? ಶಾರದೆಯು ಪತಿಯ ಹೃದಯದ ಮೇಲೆ ತಲೆಯನ್ನಿಡುತ್ತ ನುಡಿದಳು.

'ನಿಜ—ನಿಜ. ಅದಿರಲಿ. ನಿನಗೆ ಇಷ್ಟರ ತನಕ ನಿದ್ದೆಯೇ ಬರಲಿಲ್ಲವೆ?' ಅವನೆಂದ.

'ನಿದ್ದೆ! ಇದೇಕೆ ಹೀಗೆ ಕೇಳುತ್ತೀರಿ? ನನ್ನನ್ನು ಮರೆತುಬಿಟ್ಟಿರೆ? ನೀವು ಇಂದು ಬರುವುದಾಗಿ ತಿಳಿಸಿದ್ದಿರಿ — ನನ್ನಾತ್ಮಕ್ಕೆ ನಂಬಿಕೆಯಿತ್ತು. ಎಂದ ಮೇಲೆ ನಿಮ್ಮನ್ನು ನೋಡದೆ ಆತ್ಮ ಶಾಂತಿಯೆಲ್ಲಿಂದ? ಇಷ್ಟೊತ್ತಿನ ವರೆಗೆ ನಾನು ಪಟ್ಟ ಕಳವಳ ನೀವೇನು ಬಲ್ಲಿರಿ?' ಶಾರದೆಯು ಆತನ ಗಲ್ಲಕ್ಕೆ ಮೃದುವಾಗಿ ತಟ್ಟಿದಳು.

'ಶಾರದಾ,' ರಾಮಚಂದ್ರನು ಕ್ಷೀಣಸ್ವರದಿಂದ ನುಡಿದ, ಶಾರದಾ, ನಾನೊಂದು ವಿಷಯ ಹೇಳುತ್ತೇನೆ, ಅದರಂತೆ ನೀನು ಮಾಡುವೆಯಾ?'

'ಹಾಗೆನ್ನಬಾರದು ನಾನು ಮಾಡಿಯೇ ಮಾಡುತ್ತೇನೆಂದು ತಿಳಿದು ಆಜ್ಞಾಪಿಸಬೇಕು' ದೃಢಸ್ವರದಿಂದ ನುಡಿದಳು ಶಾರದಾ.

'ಹಾಗಾದರೆ ನೋಡು ನೀನು ಇನ್ನೂ ಚಿಕ್ಕವಳಲ್ಲ ವಿಯೋಗವನ್ನು ಹೆಚ್ಚಾಗಿ ಮನಸ್ಸಿಗೆ ಹಚ್ಚಿಕೊಂಡು ಆಹಾರ ನಿದ್ರೆಗಳನ್ನು ಬಿಟ್ಟು ಕಂಗೆಡ

ಬಾರದು ಶಾರದಾ. ಇಲ್ಲದಿದ್ದರೆ ಈ ಅಪರಾತ್ರಿಯಲ್ಲಿ ನಾನು ಬಂದೇ ತೀರುತ್ತೇನೆಂಬುದಕ್ಕೆ ಆಧಾರವೇನಿತ್ತು?'

'ಆತ್ಮವಿಶ್ವಾಸ'

'ಒಂದು ವೇಳೆ ನಾನು ಬಾರದಿರುತ್ತಿದ್ದಲ್ಲಿ ನಿನಗೆಷ್ಟು ನಿರಾಶೆಯಾಗು ತ್ತಿತ್ತು. ನಿರಾಶೆಯು ವೇದನೆಯು ಬಹಳ ಭಯಂಕರ. ಕೂಡದು ಶಾರದಾ, ನೀನು ಹೀಗೆ ಕಂಗೆಡಬಾರದು!'

'ಆಗಲಿ'

'ಜಾಣೆ ನೀನು. ಆದರೆ ಬಾಯಲ್ಲಿ ಆಗಲೆಂದಂತಲ್ಲ. ಸಹನೆ— ಮನುಷ್ಯರಾದವರು ಅದನ್ನು ಕಲಿಯಬೇಕು. ಎಲ್ಲವೂ ಪರಮಾತ್ಮನ ಇಚ್ಛೆಯಂತೆ ಆಗಬೇಕಲ್ಲವೆ?'

'ಅಯ್ಯೋ, ಸಾಕಿನ್ನು. ಬಂದವರೇ ಅಗಲುವ ಪ್ರಸ್ತಾಪ — ಎಂದ ಮೇಲೆ ವಿಯೋಗ ವೇದನೆಯು ಯಾರಲ್ಲಿ ಹೆಚ್ಚು ನಾಟಿಕೊಂಡಿದೆ ಎಂಬುದು ಅರ್ಥವಾಗುವುದಿಲ್ಲವೆ?'

ರಾಮಚಂದ್ರನ ದೃಷ್ಟಿಯು ಅವಳ ಮುಖದ ಮೇಲೆ ಸ್ಥಿರವಾಗಿತ್ತು.

'ಶಾರದಾ, ನೀನು ಅದೆಷ್ಟು ಚೆಲುವೆಯೆ!ನಿನ್ನಕೂದಲು ಮತ್ತೂ ಚೆಂದ.'

'ಇಂದೆಲ್ಲ ಏನೇನೋ ಆಗಿದೆ ನಿಮಗೆ!'

'ಕೊನೆಯದಾಗಿ ಒಂದು ಲೋಟಿ ನೀರು ಕೊಡು.'

'ಅದೇಕೆ ಕೊನೆಯದಾಗಿ?'

'ರಾತ್ರೆ ಕಳೆಯುತ್ತ ಬಂತೆಂದು ಹೇಳಿದೆ. ಬಾಯಾರುತ್ತಿದೆ. ನೀರು ಕುಡಿದು ಮಲಗೋಣವಲ್ಲವೆ?'

ಶಾರದೆಯು ನೀರನ್ನು ಕೊಟ್ಟು ದೀಪವನ್ನು ಸಣ್ಣದಾಗಿರಿಸಿದಳು.

* * * *

'ಎದ್ದೆಯೇನಮ್ಮ ಶಾರದಾ?'

'ಊಂ—ಏನು! ಅಯ್ಯೋ, ಏನಿದು—ಏನಾಗಿದೆ ನನಗೆ! ಅಯ್ಯೋ, ಅವರಾದರೂ ಎಬ್ಬಿಸಬಾರದಿತ್ತೆ!'

'ಯಾರಮ್ಮ ಅವರು?'

'ಯಾಕತ್ತೆ ಹಾಗೆ ಕೇಳುತ್ತೀರಿ? ಅವರೇ!'

'ಶಾರದಾ— ಎಚ್ಚರದಲ್ಲಿರುವೆಯ?'

'ಅತ್ತೆ, ನನ್ನನ್ನು ಹುಚ್ಚುಕಟ್ಟಿಸುತ್ತೀರಾ?'

'ನೀನು ಹೋಗು — ಮುಖ ತೊಳೆದು ಬಾ. ಇಂದು ಯುಗಾದಿ ಯೆಂಬುದು ಗೊತ್ತಿಲ್ಲವೆ? ಏನೇನೋ ಭ್ರಾಂತಿ ಹಚ್ಚಿಕೊಂಡು ಹರಟಿದರೆ ಹೇಗಮ್ಮ? ಮೊದಲು ಮುಖ ತೊಳೆದು ಕಣ್ಣೋಡಂತೆ.'

'ಅತ್ತೆ, ಹೊಸ ವರ್ಷದೊಂದಿಗೆ ನಿಮ್ಮ ಸ್ವಭಾವವಾದರೂ ಹೇಗೆ ಬದಲಾಗಿದೆಯಪ್ಪಾ!'

'ಗೊತ್ತಾಯಿತು ನನಗೆ. ರಾತ್ರಿಯೆಲ್ಲ ಉಪವಾಸ—ಜಾಗರಣೆ— ಮಾಡಿ ನಿನ್ನ ಪ್ರಕೃತಿಯು ಕೆಟ್ಟಿದೆ. ಬೇಕಾದುದನ್ನು ಮಾಡು. ನನಗೆ ಕೆಲಸವಿದೆ. ಹೇಳಿದ್ದನ್ನು ಕೇಳಲಾರದವರಿಗೆ ಮತ್ತೇನೆನ್ನೋಣ!'

ಶಾರದೆಯು ದೊಡ್ಡ ಸಮಸ್ಯೆಯಲ್ಲಿ ಬಿದ್ದಳು. ಅತ್ತೆಯು ನಿಜ ವಾಗಿಯೂ ವಿನೋದವಾಡಿದರೆ? ಅವಳಿಗೆ ಆಶ್ಚರ್ಯವೆನಿಸಿತು. ಅವಳು ಮನಸ್ಸಿನಲ್ಲೇ ನಗುತ್ತ ಮುಖತೊಳೆಯಲು ಹೋದಳು. ಮುಖತೊಳೆ ದಾಯಿತು. ದೇವರನ್ನು ನೋಡಿದಳು — ತುಲಸಿಗೆ ನೀರೆರೆದಾಯಿತು. ಇಷ್ಟು ಹೊತ್ತಿನ ವರೆಗೂ ಪತಿಯ ಸುಳಿವಿಲ್ಲದುದನ್ನು ನೋಡಿ ಅವಳಿಂದ ಸಹಿಸಲಾಗಲಿಲ್ಲ. ಅವಳು ದೀನಸ್ವರದಿಂದ ಅತ್ತೆಯನ್ನು ಕರೆದಳು: 'ಅತ್ತೆ!'

'ಇನ್ನೂ ಮಗುವಿನಂತಿರುವೆಯಲ್ಲ ಶಾರದಾ? ಕೆಲಸಕ್ಕೆ ಕೈಹಚ್ಚ ಬಾರದೆ? ಬೇಗ ಸ್ನಾನ ಮುಗಿಸು. ಮತ್ತೆ ರಾಮು ಹೊಸ ಸೀರೆಯೊಂದಿಗೆ ಬಂದಾಗ ಅದನ್ನುಡಬೇಡವೆ?'

'ಓಹೋ, ಮುಖ ತೋರಿಸುವ ಮುಂಚೆಯೇ ಸೀರೆಗಾಗಿ ಹೋಗಿರು ವರಲ್ಲ! ರಾತ್ರಿಯೇ ಹೇಳಿದರು—ತರಲಾಗಲಿಲ್ಲವೆಂದು. ಅಷ್ಟು ಅವಸರ ವೇನಿತ್ತಪ್ಪ. ಸಾಯಂಕಾಲ ಉಡಬಹುದಿತ್ತು!'

'ರಾತ್ರಿ ಸ್ವಪ್ನಕಂಡಿದ್ದೆಯ?'

'ಯಾಕತ್ತೆ ಇನ್ನೂ ಹಾಗೆ ಹೇಳುತ್ತೀರಿ! ಬೆಳಿಗ್ಗೆ ನೀವವರನ್ನ ನೋಡಿಲ್ಲವೆ?'

'ನಿಜವಾಗಿಯೂ ನೀನು ಕುಚೋದ್ಯ ಮಾಡುತ್ತಿರುವೆಯಾ?'

'ಅಯ್ಯೋ ಅತ್ತೆ, ನನಗೆ ನಿಮ್ಮದೇ ಪರಿಹಾಸವೆನಿಸುತ್ತದೆ. ಹಾಗಾದರೆ ನಿನ್ನೆ ರಾತ್ರೆ ಹನ್ನೆರಡರ ಸರಿಯಾಗಿ ಅವರು ಬಾಗಿಲು ತಟ್ಟಿದುದು ಸುಳ್ಳೆ? ನಾನು ತೆರೆದು ಬಾಯಾರಿಕೆ ಕೊಟ್ಟದ್ದು—ಆಯಾಸದಿಂದ ಮಲಗಿದ ನಿಮ್ಮ ನ್ನೆಬ್ಬಿಸಬಾರದೆಂದುದು—ಅನಂತರ ನಾವಿಬ್ಬರೂ ಮಾತನಾಡಿಕೊಂಡುದು—ಕೊನೆಗೆ ಹೊತ್ತಾಯಿತೆಂದು ಮಲಗಿ ನಿದ್ದೆಹೋದುದು—ಇವೆಲ್ಲ ಸ್ವಪ್ನವೆ?'

'ಅಹೋರಾತ್ರಿ ತದೇಕಧ್ಯಾನದಲ್ಲಿದ್ದರೆ ಸ್ವಪ್ನ ಬೀಳದಿದ್ದೀತೆ?'

'ನಿಮ್ಮಾಣೆ ಅತ್ತೆ—ಸ್ವಪ್ನವಲ್ಲ. ತುಂಬಿದ ಕೂಜೆಯ ನೀರು ಅರ್ಧ ವಾದುದನ್ನು ತೋರಿಸಲೆ?'

'ಕಮಲಮ್ಮನವರು ಅವಾಕ್ಕಾಗಿ ಶಾರದೆಯ ಕೋಣೆಗೆ ನಡೆದರು. ಹಾಸಿಗೆಯು ಅಸ್ತವ್ಯಸ್ತವಾಗಿದ್ದುದು ತೋರಿತು. ಒಡನೆ ಶಾರದೆಯು ಕೂಜೆಯನ್ನು ತೆರೆದಳು—ನೀರು ತುಂಬಿದಂತೆಯೇ ಇತ್ತು! ಲೋಟೆಯು ಮಾತ್ರ ನೆಲದ ಮೇಲೆ ಅಡ್ಡವಾಗಿ ಬಿದ್ದಿತ್ತು. ಶಾರದೆಗೆ ಮೈಬೆವರಿತು. ನಾಚುಗೆಯಿಂದ ಮೈಯೆಲ್ಲ ಕುಂದಿದಂತಾಯಿತು. ಅವಳು ತಲೆಬಗ್ಗಿಸಿ ನುಡಿದಳು. 'ನೀವೆಂದಂತೆ ಸ್ವಪ್ನವೇ ಇರಬೇಕು.' ಹೇಳುತ್ತಿರುವಾಗ ಅವಳ ಸರ್ವಾಂಗ ನಡುಗಿತು. ಬೇರು ಕಿತ್ತ ಮರದಂತೆ ಅವಳು ನೆಲದ ಮೇಲೆ ಕುಳಿತಳು.

'ತಂತಿ — ತಂತಿ! ಕಮಲಮ್ಮನವರಿಗೆ' ಹೊರಗಿನಿಂದ ತಂತಿ ಜವಾನನ ಸ್ವರ. ಶಾರದೆಯು ಏಳಲು ಪ್ರಯತ್ನಿಸಿದಳು. ಕೈಕಾಲುಗಳು ಸ್ವಾಧೀನವಿದ್ದಂತೆ ತೋರಲೇ ಇಲ್ಲ. ಕಮಲಮ್ಮನವರು ಒಂದೇ ಉಸಿರಿನಿಂದ ಹೋಗಿ ತಂತಿ ಪಡೆದು ಶಾರದೆಯ ಕೋಣೆಗೆ ಬಂದರು. ಶಾರದೆಯು ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ನಡುಗುವ ಕೈಯಿಂದ ತಂತಿಯನ್ನು ಶಾರದೆಯ

ಕೈಗಿತ್ತರು. ಶಾರದೆಯು ಕಣ್ಣೊರಸಿಕೊಳುತ್ತ ಅದನ್ನು ಓದಿದಳು . .. . ಹಾಗೆಯೇ ಮಡಚಿ ಅದನ್ನು ಅತ್ತೆಯ ಕೈಗಿತ್ತಳು. ಮಾತಾಡಲಿಲ್ಲ. ಅವಳ ದುಃಖವು ನಿಂತುಹೋಗಿತ್ತು. ಕಣ್ಣುಗಳು ಉಜ್ವಲವಾಗಿದ್ದುವು.

'ಏನಿದೆ — ಏನಿದೆ ತಂತಿಯಲ್ಲಿ? ಬೇಗ ಹೇಳಬಾರದೇನಮ್ಮ?' ಕೇಳುವಾಗ ಕಮಲಮ್ಮನವರ ಕಣ್ಣುಗಳಲ್ಲಿ ನೀರು ತುಂಬಿತು. ಶಾರದೆಯು ಗಟ್ಟಿಯಾಗಿ ನಕ್ಕುಬಿಟ್ಟಳು. ಕಮಲಮ್ಮನವರು ನಡುಗಿದರು. ಅಷ್ಟು ವಿಚಿತ್ರವಿತ್ತು ಆ ನಗು!

'ಶಾರದಾ — ಹೇಳು— ತಂತಿಯಲ್ಲೇನಿದೆ?'

ಉತ್ತರವಾಗಿ ಅದೇ ನಗು. ಕಮಲಮ್ಮನವರು, ಚಾವಡಿಯ ಕಂಡಿಯಿಂದ ಪಕ್ಕದ ಮನೆ ಸುಬ್ಬಮ್ಮನವರ ಮಗನನ್ನು ಕರೆದು ತಂತಿಯನ್ನೋದಿಸಿದರು. ಅವನು ಓದುತ್ತ ನಡುಗಿದ

'ಏನಂತಪ್ಪಾ—ಬೇಗ ಹೇಳು. ಅವನಿಗೆ ಮೈ ಚೆನ್ನಾಗಿಲ್ಲವೆ?'

'ಏನು ಹೇಳಲಮ್ಮಾ—ಸ್ಟೇಶನ್ ಮಾಸ್ಟರರಿಂದ ಬಂದ ತಂತಿ ಓಡುವ ರೈಲನ್ನು ಹತ್ತುವಾಗ ಕಾಲು ಜಾರಿ ಬಿದ್ದುದಂತೆ . . '

ಕೇಳಿದ್ದೇ ತಡ. ಮುಂದೇನೆಂದು ಕೇಳಲು ಕಮಲಮ್ಮನವರಿಗೆ ಸ್ಮೃತಿಯೇ ಇರಲಿಲ್ಲ ಅರಿವು ಮರಳಿದಾಗ, 'ಅಯ್ಯೋ, ಕೇವಲ ಹಸುಳೆ. ಪ್ರಪಂಚದಲ್ಲಿ ಇನ್ನೇನುಳಿಯಿತಮ್ಮಾ ನಿನಗೆ?' ಎಂದೊದರಿದರು. ಶಾರದೆಯು ಅವರ ಕಾಲಬುಡದಲ್ಲಿ ಕುಳಿತಿದ್ದವಳು ಬಿಗಿದ ಕಂಠದಿಂದ ಹೇಳಿದಳು: 'ಅವರನ್ನು ಪುನಃ ಸೇರುವ ದಿನದ **ಪ್ರತೀಕ್ಷೆ** ಅತ್ತೆ!'



# ಘಾತಕ ಜಿಜ್ಞಾಸೆ

ಶ್ರೀ ಪಿ ವೆಂಕಟರಮಣಾಚಾರ್ಯರು

*

ಉಡುಪಿಯ 'ಕಿರಿಯರ ಪ್ರಪಂಚ'ದವರು ಪ್ರಕಟಿಸಿರುವ 'ಮಧುವನ' 'ಕಾವ್ಯಸಾಮ್ರಾಜ್ಯ'ಗಳ ಮೇಲ್ಕೆಗೆ ಇವರ ಕೈವಾಡವೂ ಕಾರಣವಾಗಿತ್ತು ಇವರು ಹುಟ್ಟುಕವಿಗಳು. ಉತ್ತಮ ಕವಿತೆಗಳನ್ನು ಬರೆದಿದ್ದಾರೆ— ಇವರ ಅನೇಕ ಕವಿತೆಗಳು ಜಯ ಕರ್ನಾಟಕ— ಪ್ರಬುದ್ಧ ಕರ್ನಾಟಕ— ಧುರೀಣ —ಮುಂತಾದುವುಗಳಲ್ಲಿ ಅಚ್ಚಾಗಿವೆ. ಒಳ್ಳೆಯ ವಿಮರ್ಶಕರೂ ಹೌದು ಇವರು ಕತೆಗಳನ್ನು ಹೆಚ್ಚಾಗಿ ಬರೆದಿಲ್ಲವಾದರೂ— ಕತೆಗಾರಿಕೆಯ ಗುಟ್ಟೆಲ್ಲ ಇವರಿಗೆ ತಿಳಿದಿವೆ ಇವರು ಭಾವ-ರಸ-ಭಾಷೆಗಳನ್ನು ಹೊಂದಿಸಿಕೊಂಡು ಬರೆಯಬಲ್ಲವರು ಸಂಗ್ರಹವಾಗಿ ಯಾವುದೂ ಪ್ರಕಟವಾಗಿಲ್ಲವಾದರೂ— ಮಧುವನ— ಅಂತರಂಗದ ಕತೆಗಳು— ಕಾವ್ಯಸಾಮ್ರಾಜ್ಯ— ಪರಾಗ— ನಮ್ಮ ಕವಿತೆಗಳು —ಮುಂತಾದ ಸಂಗ್ರಹಗಳಲ್ಲಿ ಇವರ ಕತೆ-ಕವನಗಳು ಅಚ್ಚಾಗಿವೆ. ಲೋಕಾನುಭವವನ್ನು ಸಂಪೂರ್ಣವಾಗಿ ದೊರಕಿಸಿಕೊಂಡಿದ್ದಾರೆ. ಬಂಗಾಲೀ- ಹಿಂದೀ- ಸಂಸ್ಕೃತ- ಇಂಗ್ಲಿಷ್ ಭಾಷೆಗಳ ಸಾಹಿತ್ಯವನ್ನು ಅವಲೋಕಿಸಿದ್ದಾರೆ ಕನ್ನಡದ ಏಳಿಗೆಗಾಗಿ ಒಳ್ಳೆಯ ಕೆಲಸಮಾಡುವ ತರುಣರಿವರು

**ಮಾರ್ಚಿ ೨೨, ೧೯೨೮:**

ನಿರಂತರವಾಗಿ ಆಕಾಶಗಾಮಿನಿಯಾದ ನನ್ನ ಕಲ್ಪನೆಯು ಒಂದು ಆಸರು ಪಡೆದಂತಿದೆ. ಬಯಕೆಯು ನೆಲವೆಲ್ಲ ಬೇರುಬಿಟ್ಟು ಈಗ ಬುಗ್ಗೆಯೊಂದನ್ನು ಕಂಡಿದೆ. ಇಷ್ಟು ದಿನಗಳ ಜೀವನದಲ್ಲಿ ನನ್ನ ಭಾವನೆಯು ತನ್ನಲ್ಲೆ ತಾನೊಂದು ಅಸಂಪೂರ್ಣತೆಯ ವೇದನೆಯನ್ನು ಅನುಭವಿಸುತ್ತಿತ್ತು. ಬೈರನ್ ಹೇಳುವಂತೆ ಹದಿಮೂರನೆಯ ಮತ್ತು ಹದಿನಾರನೆಯ ವಯಸ್ಸಿನೊಳಗೆ ಪುರುಷನ ಜೀವನದಲ್ಲಿ, ಅನುಭೂತಿಯಲ್ಲಿ ಎಂತಹ ಬದಲಾವಣೆಯು ಗೋಚರವಾಗುತ್ತದೆ — ಈಗ ನನ್ನ ವಯಸ್ಸು ಇಪ್ಪತ್ತೊಂದು. ಕಳೆದ ಐದು ವರುಷಗಳಿಂದ ನನ್ನ ಕಲ್ಪನೆಯು ಯಾವುದೋ ಒಂದು ತೀವ್ರ ಆಕಾಂಕ್ಷೆಯಿಂದ ಅಸ್ಫುಟವಾಗಿ— ಆದರೆ ನಿರಂತರವಾಗಿ— ಕೊರಗುತ್ತಿತ್ತು.

ನಾಳೆ ನನ್ನ ಜೀವನದ ಅನಂತ ಆಕಾಂಕ್ಷೆಗಳ ಮೂರ್ತಿಯಾದ ಚಿರಸಂಗಿನಿಯೊಡನೆ ನಾನು ಆಬದ್ಧನಾಗಲಿರುವೆನು. ಓಹ್! ಈ ಬಂಧನದ ಯೋಚನೆಯು ಎಷ್ಟು ಮಧುರವಾದುದು! — ಕೊನೆಗೆ ನನ್ನಲ್ಲಿ ಯಾವ ಕೊರತೆಯು ಮಿಡುಕುತ್ತಿತ್ತೆಂಬುದರ ಅರಿವು ನನಗಾಗಿದೆ. ಬಾಳಿನ ಚಿರಂತನ ಪಥದಲ್ಲಿ ನಾನು ಏಕಾಕಿಯಾಗಿದ್ದೆ. ನನ್ನ ಎಣಿಕೆಗಳನ್ನು ಅರುಹಲು, ನನ್ನ ಒಂಟಿತನವನ್ನು ಕೊನೆಗೊಳಿಸಲು, ನನ್ನ ಅನುಭವವನ್ನು ಪೂರೈಸಲು ಇನ್ನೊಂದು ಜೀವದ ಆಸರು ಬೇಕಿತ್ತು. ಅದು ನಾಳೆ ಪೂರ್ಣವಾಗುವುದು.

ನಾಳಿನ ನನ್ನ ರಾಣಿಯನ್ನು ನಾನು ಒಂದೇ ತಡವೆ ನೋಡಿದ್ದೇನೆ— ಒಂದೇ ಮಾತಿನಲ್ಲಿ, ಆಕೆ ಚೆಲುವೆ— ಚೆನ್ನಾರ ಚೆಲುವೆ;—ಆಕೆಯ ಕಣ್ಣು

ಗಳಲ್ಲಿ ಮಿಂಚಿದೆ, ಮುಖದಲ್ಲಿ ತಿಂಗಳಿದೆ, ತುಟಿಗಳಲ್ಲಿ ಗುಲಾಬಿಯ ಲಾಲಿಯಿದೆ. ಈ ವರೆಗೆ ನಾನೆಷ್ಟೋ ಯುವತಿಯರನ್ನು ನೋಡಿದ್ದೇನೆ, ಆದರೆ ಈ ರೀತಿಯಲ್ಲಿ ಮುಗ್ಧನಾಗಿರಲಿಲ್ಲ.

ನಾನು ಇಂದು ಆನಂದದ ನಲಿನನಾಳಗಳಲ್ಲಿ ಕಾಲ್ಕೊಂದು ಸಿಕ್ಕಿ ಬಿದ್ದಿದ್ದೇನೆ . ನಾಳೆಯ ಅನುಭವದ ಜಾಗೃತ ಸ್ವಪ್ನಗಳಲ್ಲಿ ನನ್ನ ಮನಸ್ಸು ಲೀನವಾಗಿದೆ ... . ಕಾಲದ ಪ್ರವಾಹವು ಒಮ್ಮಿಂದೊಮ್ಮೆ ಶಾಂತ ವಾಗಿ ಹೋದ ಹಾಗಿದೆ . . ನಾಳಿನ ವರೆಗಿನ ಕ್ಷಣಗಳು ಬಹಳ ಭಾರ ವಾಗಿ ತೋರುವುವು . .

## ಎಪ್ರಿಲ್ ೨೫, ೧೯೨೮

ನನ್ನ ಜೀವನಸಂಗಿನಿಯಿಲ್ಲಿ ನನ್ನ ಬಳಿ ಹಾಸುಗೆಯ ಮೇಲೆ ನಿದ್ರಿಸುತ್ತಿದ್ದಾಳೆ. ಹೊರಗೆ ತಿಂಗಳಿರುಳು ಪ್ರಶಾಂತವಾಗಿ ಹರಡಿಕೊಂಡಿದೆ- ತಿಂಗಳು ಮಾಡಿನಲ್ಲಿನ ಒಂದು ಛಿದ್ರದಿಂದ ಒಳಗೆ ಹಾಯ್ದು ಆಕೆಯ ಮುಖದ ಮೇಲೆ ಬಿದ್ದಿದೆ. ದೀಪವನ್ನು ಒಂದು ನಿಮಿಷ ಚಿಕ್ಕದು ಮಾಡಿಟ್ಟೆ- ಆ ತಿಂಗಳಿನ ಕಿರಣಗಳು ಸ್ಪಷ್ಟವಾಗಿ ಆಕೆಯ ಮುಖದ ಮೇಲೆ ಬೀಳ ಲೆಂದು — ತಂಗಾಳಿ ಸುಳಿ ಸುಳಿದು ಆಕೆಯ ಅಲಕವನ್ನೊಂದು ಬಾರಿ ಮೋರೆಯ ಮೇಲೆ ಓಲಾಡಿಸಿತು. ಕಿಡಿಕಿಯೊಳಗಿಂದ ಒಳಗೆ ಬಂದು ಹರಡಿಕೊಂಡಿರುವ ಜ್ಯೋತ್ಸ್ನೆಯ ನಸುಬೆಳಕಿನಲ್ಲಿ ಆಕೆಯ ಮೋರೆಯನ್ನು ತೃಷಿತ ನಯನಗಳಿಂದ, ಅವಿಚಲ ದೃಷ್ಟಿಯಿಂದ ನೋಡುತ್ತಾ ಕುಳಿತೆ . ..

ಆ ಮುಖದಲ್ಲಿ ನಾನು ಇಡಿಯ ವಿಶ್ವವನ್ನೇ ಕಂಡೆ . . ನಾನು ಆಕೆಯ ಸೌಂದರ್ಯಮದಿರೆಯನ್ನು ಕುಡಿದು ಮತ್ತನಾಗುತ್ತಿದ್ದೇನೆ.

## ಎಪ್ರಿಲ್ ೧೩, ೧೯೨೯:

ವಿವಾಹಕ್ಕೆ ಮೊದಲು ಜೀವನವು ವಿವಾಹದಿಂದ ಪರಿಪೂರ್ಣತೆ ಯನ್ನು ಪಡೆಯುವುದೆಂದು ಭಾವಿಸಿದ್ದೆ. ಈ ಭಾವನೆಯು ಸತ್ಯವೋ ಎಂಬ ಅನುಮಾನವು ನನ್ನಲ್ಲಿ ಉದಯಿತವಾಗಿದೆ ....... ಒಂದು ವೇಳೆ ನನ್ನ

ಜೀವನವು ಪರಿಪೂರ್ಣವಾದುದೇ ಆದರೆ .ಇನ್ನೂ ಈ ತೃಷ್ಣೆಯೇಕೆ? . ಪರಿಪೂರ್ಣತೆಯಲ್ಲಿಯೂ ಒಂದು ಅತೃಪ್ತಿಯಿರಲು ಸಾಧ್ಯವಿದೆಯೇ? ..

ವಿವಾಹವಾಗಿ ಒಂದು ವರ್ಷವಾಗುತ್ತಾ ಬಂತು. ಈ ವ್ಯವಧಾನ ದಲ್ಲಿ ಪ್ರೇಮಮದಿರೆಯು ನನ್ನಿಂದ ಉನ್ಮತ್ತಗೀತಗಳನ್ನು ಹಾಡಿಸಿದೆ. ಇಡೀ ಕರ್ನಾಟಕದಲ್ಲೆಲ್ಲಾ ನನ್ನ ಈ ಗೀತಗಳಿಗೆ ಮಾನವು ಪ್ರಾಪ್ತ ವಾಗಿದೆ.— ಪ್ರಣಯವು ನನ್ನ ಕೀರ್ತಿತೃಷ್ಣೆಯನ್ನು ತಣಿಸಿದೆ.— ಆದರೆ ತಾನು ಅತೃಪ್ತವಾಗಿದೆ . ..

ನಾನು ಯಾವ ಕಡೆಗೆ ಹರಿದು ಹೋಗುತ್ತಿದ್ದೇನೆ? . .. ಅದರ ಅರಿವೇ ನನಗಿಲ್ಲವಾಗಿದೆ.

**ಎಪ್ರಿಲ್ ೧೪, ೧೯೨೯.**

ಈವೊತ್ತು ನನ್ನ ತಲೆಯಲ್ಲಿ ಎಲ್ಲ ತೆರದ ವಿಕಲ್ಪ ಭಾವನೆಗಳು ಆವರಿಸಿಕೊಳ್ಳುಹತ್ತಿವೆ ಏಕೆ? ನನ್ನನ್ನು ಯಾವುದೋ ಒಂದು ನಿರ್ದಯ ಹಸ್ತವು ಈ ಸುಖಸ್ವಪ್ನದಿಂದ ಕುಲುಕಿಸಿ ಎಬ್ಬಿಸುವಂತೆ ಭಾಸವಾಗುತ್ತಿದೆ

ಸಂಜೆ ಪತ್ರಿಕೆಯನ್ನೋದುತ್ತಿರುವಾಗ ಒಂದು ಕಡೆ ಒಂದು ವಾರ್ತೆ ಯನ್ನು ಕಂಡೆ–ಒಬ್ಬಾಕೆ ಹುಡುಗಿ ತನಗೆ ನಿಶ್ಚಿತನಾದ ವರನು ಕುರೂಪಿ ಯೆಂದು ಮದುವೆಯ ಮುಂಚಿನ ದಿನ ಬಾವಿಗೆ ಹಾರಿ ಆತ್ಮಹತ್ಯೆ ಮಾಡಿ ಕೊಂಡಳಂತೆ ಇನ್ನೊಂದು ಕಡೆ–'ಫ್ರಾನ್ಸ್'ನ ಕೆಲವು ಮಂದಿ ಕುತೂ ಹಲಿಗಳು ಪ್ರೇಮದ ಪ್ರಚೋದಕಗಳಾವುವೆಂದು ಶೋಧ ಮಾಡಿದ್ದಾರೆ.— ಅವರ ಅಭಿಪ್ರಾಯದಂತೆ ಪ್ರೇಮಕ್ಕೆ ಸೌಂದರ್ಯವು ಅತ್ಯಂತ ಪ್ರಮುಖ ವಾದ ದ್ಯೋತಕವಂತೆ! . ಒಮ್ಮಿಂದೊಮ್ಮೆ ನನಗೆ ಒಂದು ವಿಚಾರವು ಹೊಳೆಯಿತು... ..

ಕ್ಲಬ್ಬಿನಲ್ಲಿ ಪತ್ರಿಕೆಯನ್ನು ಹಾಗೆಯೇ ಒಗೆದು ಬಿಟ್ಟು ಮನೆಗೆ ಬಂದೆ. ನನ್ನ ಕೋಣೆಗೆ ಹೋಗಿ ಕನ್ನಡಿಯನ್ನು ತೆಗೆದು ನನ್ನ ಮೋರೆಯನ್ನು ನೋಡಿ ಕೊಂಡೆ..... .. ನಾನು ಸುಂದರನೆ? ..... ಎಂದಿಗೂ ಅಲ್ಲ . . ... ನನ್ನನ್ನು

ಹಾಗೆಂದು ಈ ವರೆಗೆ ಯಾರೂ ಅಂದದ್ದಿಲ್ಲ . ಆದರೂ ಚೆನ್ನಾಗಿ ಕನ್ನಡಿಯಲ್ಲಿ ನೋಡಿಕೊಂಡೆ . ನಾನು ಕುರೂಪಿ . ! ಕೆಳದುಟಿಯ ಮೇಲೆ ನಿಂತು ಹೊರಗೆ ನೀಳ್ಕರಿಸುವ ಹಲ್ಲುಗಳು . ಗುಳಿಬಿದ್ದ ಕದವು . ಇಕ್ಕಟ್ಟಾದ ಹಣೆ .... ದಪ್ಪವಾದ ತುಟಿಗಳು .. ಚಟ್ಟಗಾದ ಮೂಗು . ನಾನು ಇಷ್ಟೊಂದು ಕುರೂಪಿ! . ಈ ವರೆಗೆ ನನ್ನ ರೂಪದ ಬಗೆಗೆ ನನಗೆ ಈ ತೆರನಾಗಿ ಕುತೂಹಲವುಂಟಾದದ್ದಿಲ್ಲ. ಆದುದರಿಂದಲೆಯೋ ಏನೋ ನಾನು ಎಷ್ಟೋ ಬಾರಿ ಕನ್ನಡಿಯಲ್ಲಿ ಮುಖವನ್ನು ನೋಡಿಕೊಂಡಿದ್ದರೂ ಈ ವಿಚಾರಗಳು ನನಗೆ ಹೊಳೆದಿರಲಿಲ್ಲ . ನಾನು ಸುಂದರನೆಂದು ನಂಬುವುದಕ್ಕೆ ನನ್ನಲ್ಲಿ ಒಂದಾದರೂ ಗುಣವು ಕಾಣುವುದಿಲ್ಲ ನನಗೆ . . .

ಈಗ ಯೋಚಿಸುತ್ತಾ ಇದ್ದೇನೆ. ಪ್ರೇಮಕ್ಕೆ ಸೌಂದರ್ಯವು ಅಗತ್ಯವೇ? . ಅಗತ್ಯವಲ್ಲವೆನ್ನುವುದಕ್ಕೆ ನನಗೆ ಒಂದು ಕಾರಣವೂ ಹೊಳೆಯುವುದಿಲ್ಲ. ಮನೆಯ ಬೆಕ್ಕಿನ ಮರಿಗಳಲ್ಲಿ ನಾನು ಚೆಲುವಾಗಿರುವುದನ್ನೇ ಹೆಚ್ಚು ಪ್ರೀತಿಸುತ್ತೇನೆ. ತೋಟಕ್ಕೆ ಹೋದರೆ ಸುಂದರವಾಗಿರುವ ಹೂವನ್ನೇ ಕೊಯ್ಯುತ್ತೇನೆ ಅಸುಂದರವಾದುದರ ಕಡೆಗೆ ನನ್ನ ಲಕ್ಷವೇ ಹೋಗಲೊಲ್ಲದು! ನನ್ನ ಹೆಂಡತಿ ಸುಂದರಿ! ..

ಹೌದು! ನನ್ನ ಹೆಂಡತಿ ಸುಂದರಿ! ಅದನ್ನು ನಿಶ್ಚಯಮಾಡಿಕೊಳ್ಳುವುದಕ್ಕಾಗಿ ನಾನು ಹೋಗಿ ಆಕೆಯನ್ನು ಪುನಃ ನೋಡಿಕೊಂಡು ಬಂದಿದ್ದೇನೆ! . ಆಕೆಯ ಸೌಂದರ್ಯವು ಅಮೋಘವಾದುದು! . . ಆದುದರಿಂದಲೇ ನಾನು ಆಕೆಯನ್ನು ಪ್ರೀತಿಸುತ್ತೇನೆ! ಆದರೆ ಆಕೆ ನನ್ನನ್ನು ಪ್ರೀತಿಸುತ್ತಾಳೆಯೋ? . ಏಕೆ ಪ್ರೀತಿಸಬೇಕು? ಹೇಗೆ ಪ್ರೀತಿಸಬೇಕು? ... . ನನ್ನ ಕಣ್ಣುಗಳಲ್ಲಿ ಕಾಂತಿಯಿಲ್ಲ, ನನ್ನ ಕದಪುಗಳಲ್ಲಿ ರಾಗವಿಲ್ಲ, ನನ್ನ ಹಣೆಯಲ್ಲಿ ವೈಶಾಲ್ಯವಿಲ್ಲ .. . ಆಕೆ ನನ್ನನ್ನು ಹೇಗೆ ಪ್ರೀತಿಸಬೇಕು? ಆಕೆಯಲ್ಲಿ ನಾನು ಪ್ರೇಮವನ್ನು ನಿರೀಕ್ಷಿಸುವುದಕ್ಕೆ ನ್ಯಾಯವಿದೆಯೋ?

ಆದರೂ ಆಕೆ ನನ್ನನ್ನು ಪ್ರೀತಿಸುತ್ತಾಳೆಯೇ? .. . ಹೇಗೆ ನಂಬಲಿ!— ನಾನು ಕುರೂಪಿ! .ಓಃ. ನಾನು ಕುರೂಪಿಯೆಂಬ ವಿಚಾರವು ಬಂದೊಡನೆಯೇ ನನ್ನ ಹೃದಯವು ದಹಿಸತೊಡಗುವುದು. .

**ಎಪ್ರಿಲ್ ೧೫, ೧೯೨೯:**

ನಿನ್ನೆ ರಾತ್ರಿ ಇಡೀ ನಿದ್ದೆ ಹತ್ತಲಿಲ್ಲ . ಒಂದೇ ವಿಚಾರವು ನನ್ನ ಹೃದಯವನ್ನು ಹಿಡಿದುಕೊಂಡಿದೆ ನನ್ನನ್ನಾಕೆ ಪ್ರೀತಿಸುತ್ತಾಳೋ? ನನ್ನಲ್ಲಿ ಆಕೆಯ ಈಯೊಂದು ವರ್ಷದ ವ್ಯವಹಾರವನ್ನೆಲ್ಲಾ ವಿಮರ್ಶಿಸಿ ನೋಡಿದೆ . ಆಕೆಯ ವ್ಯವಹಾರದಲ್ಲಿ ಪ್ರೇಮವನ್ನು ಹುಡುಕಿ ಕಾಣಲು ಅಶಕ್ತನಾಗಿದ್ದೇನೆ! . ಆದರೂ ನನಗೆ ಹಾಗೆ ನಂಬಲು ಇಷ್ಟವಿಲ್ಲ.

ಹೇಗೆ ಕಂಡುಹಿಡಿಯಲಿ? . ಆಕೆಯ ತಂದೆ ತಾಯಿಗಳು ನನ್ನ ಅನುಕೂಲ ಪರಿಸ್ಥಿತಿಯನ್ನು ನೋಡಿ ನನಗೆ ವಿವಾಹ ಮಾಡಿಸಿದ್ದಾರೆ, ನನ್ನ ಹಣವನ್ನು ನೋಡಿ ಆಕೆ ನನ್ನನ್ನು ಮದುವೆಯಾಗಿದ್ದಾಳೆಯೇ? ಯಾರಿಗೆಗೊತ್ತು? .

**ಎಪ್ರಿಲ್ ೨೨, ೧೯೨೯**

ನನ್ನ ಜೀವನದ ಶಾಂತಿಯ ದಿನಗಳು ಪ್ರಾಯಶಃ ಮಾಯವಾದುವೆಂದು ತೋರುತ್ತದೆ. ಈ ಎಂಟು ದಿನಗಳಿಂದ ನನ್ನ ಹೃದಯವು ಅಶಾಂತಿಯಿಂದ ಅಲ್ಲೋಲಕಲ್ಲೋಲವಾಗಿದೆ. ಏನು ಮಾಡಲಿ? . ಹೇಗಾದರೂ ಸತ್ಯವನ್ನು ಕಂಡುಹಿಡಿಯದ ವಿನಾ ನನ್ನ ಆವೇಗವನ್ನು ತಡೆದುಕೊಳ್ಳಲಾರೆ .......

**ಎಪ್ರಿಲ್ ೨೯, ೧೯೨೯:**

ಕಂಡು ಹಿಡಿದೇ ಬಿಡುವೆನು .. . ಈವೊತ್ತು ಒಂದುಪಾಯ ಹೊಳೆದಿದೆ .... ಅದನ್ನು ಕಾರ್ಯರಂಗಕ್ಕೆ ತಂದರೆ ಸತ್ಯವು ತಿಳಿಯುವುದು . .. ...ಒಂದು ವೇಳೆ ನನ್ನ ಭೀತಿಯು ಸತ್ಯವಾಗಿ ಹೋದರೆ. ......?

**ನೋ. ೨, ೧೯೨೯:**

ಆತ ಅತ್ಯಂತ ಸುಂದರ ಯುವಕ—ಮಾಧುರೀ ಮುದ್ರಣಾಲಯಕ್ಕೆ ನಾನು ಹೋಗಿದ್ದಾಗ ಈವೊತ್ತು ಅಲ್ಲಿಗೆ ಬಂದಿದ್ದ. ಮುದ್ರಣಾಲಯದ ಅಧಿಕಾರಿಯಿಂದ ಅವನು ಕೆಲಸವುಂಟೇ ಎಂದು ವಿಚಾರಿಸಲು ಬಂದಿದ್ದ. ನನ್ನ ಉದ್ದೇಶಕ್ಕೆ ಸರಿಯಾದವನಾಗಿ ಕಂಡ. ಮಾಧುರೀ ಮುದ್ರಣಾಲಯದಲ್ಲಿ ಕೆಲಸವಿಲ್ಲದುದರಿಂದ ಆತ ಹಿಂದಿರುಗಬೇಕಾಗಿ ಬಂತು. ಮಧ್ಯಾಹ್ನ ಸಮಯದಲ್ಲಿ ಬೀದಿಯಲ್ಲಿ ನನಗೆ ಪುನಃ ಸಿಕ್ಕಿದ. ನಮಸ್ಕಾರ ಮಾಡಿದ. ನಾನು ಕರೆದು ಆತನ ಯೋಗಕ್ಷೇಮ ಚರಿತ್ರಾದಿಗಳನ್ನು ವಿಚಾರಿಸಿದೆ. ಎಸ್. ಎಸ್. ಎಲ್. ಸಿ. ಕಲಿತಿದ್ದಾನೆ. ಚೆನ್ನಾಗಿ ಇಂಗ್ಲಿಷ್ ಮಾತನಾಡುತ್ತಾನೆ. ಆಕರ್ಷಣೆಗೆ ಯಾವ ಯಾವ ಯೋಗ್ಯತೆಗಳು ಬೇಕೋ ಅವೆಲ್ಲ ಅವನಲ್ಲಿವೆ. ಮುಗುಳು ನಗೆ. ಬಹಳ ವಿನಯವಂತ—ಆತ್ಮೀಯತೆಯನ್ನು ತೋರಿಸುತ್ತಾನೆ

ನನ್ನ ಜವಿಗಾನಿನ ಕೆಲಸಗಳನ್ನೂ ಲೆಕ್ಕಪತ್ರಗಳನ್ನೂ ಇಡುವುದಕ್ಕೆ ಒಬ್ಬಾತನ ಅವಶ್ಯವೂ ಇದೆ ಇಪ್ಪತ್ತು ರೂಪಾಯಿಗಳ ಸಂಬಳಕ್ಕೆ ಆತನನ್ನು ನನ್ನ ಜವಿಗಾನಿನ ಕಾರಕೂನನನ್ನಾಗಿ ನಿಯಮಿಸಿದ್ದೇನೆ. ಆತನಿಗೆ ತಂದೆ ತಾಯಿ ಇಲ್ಲವಂತೆ ಮನೆಯೊಂದಿದ್ದುದು ಕಳೆದ ವರುಷ ಹರಾಜಾಗಿ ಹೋಗಿದೆಯಂತೆ. ನಮ್ಮಲ್ಲಿಯೇ ಉಳಕೊಳ್ಳುವಂತೆ ಹೇಳಿದ್ದೇನೆ. ಒಪ್ಪಿಗೆ ಕೊಟ್ಟ.

ನಾಳೆ ಕೆಲಸಕ್ಕೆ ಹಾಜರಾಗುವವನಿದ್ದಾನೆ. ಅವನನ್ನು ಮನೆಯಲ್ಲಿ ಸರ್ವತ್ರ ಸಂಚರಿಸುವುದಕ್ಕೆ ಸ್ವಾತಂತ್ರ್ಯ ಕೊಟ್ಟುಬಿಡುವೆನು . ಏನೇನು ನಡೆಯುವುದೋ? ..

ಎದೆ ಬಡಿಯುತ್ತಿದೆ.. ಯಾವ ಕಡೆಗೆ ಹೊರಟಿದ್ದೇನೆ ಇದು ದೇವಾ!

**ಜುಲಾಯಿ ೧೫, ೧೯೨೯**

ಆತ—ಶ್ರೀನಾಥ—ಮನೆಯಲ್ಲಿ ಸರಾಗವಾಗಿ ಓಡುತ್ತಿದ್ದಾನೆ. ಬಹಳ ಒಳ್ಳೆಯ ಹುಡುಗ. ನನ್ನ ಹೆಂಡತಿಯ ಕೂಡೆಯೂ ಚೆನ್ನಾಗಿ ಪರಿಚಯ

ವಾಗಿದೆ. ನಾನು ಆ ವಿಚಾರದಲ್ಲಿ ಯಾವ ಬಾಧಕವನ್ನೂ ಹಾಕುತ್ತಿಲ್ಲ. ಕೌತುಕದಿಂದ ನಿರೀಕ್ಷಿಸುತ್ತಿದ್ದೇನೆ . .ನೋಡಬೇಕು . . .!

**ದಶಂಬರ ೧೧, ೧೯೨೯**

ನಿನ್ನೆಯಿಂದ ಈವೊತ್ತು ಶ್ರೀನಾಥನ ವ್ಯವಹಾರದಲ್ಲಿ ಕೊಂಚ ಹೆಚ್ಚುಕಡಿಮೆಯಾದಂತೆ ಕಾಣುತ್ತಾ ಇದೆ. ಆತನು ಯಾವುದೋ ಒಂದು ಅವ್ಯಕ್ತ ವ್ಯಥೆಯಿಂದ ಅನಿರ್ವಚನೀಯ ಡೋಲಾಯಮಾನ ಮನಸ್ಕತೆಯಿಂದ ನರಳುತ್ತಿರುವಂತೆ ತೋರುತ್ತದೆ ಸಾದಾ ವ್ಯವಹಾರವು ಈ ವೊತ್ತು ಸ್ವಲ್ಪ ಬದಲಾಯಿಸಿದೆ ಏನಾದರೂ ಸಂಭವಿಸಿರಬಹುದೇ ?

ನನ್ನ ಹೃದಯದ ವೇದನೆ ಹೆಚ್ಚುತ್ತಾ ಇದೆ. ನಾನು ಕುರೂಪಿ, ನನ್ನ ಹೆಂಡತಿ ಸುಂದರಿ! ಆದುದರಿಂದ ಆಕೆ ನನ್ನನ್ನು ಪ್ರೀತಿಸುತ್ತಿರಲಿಕ್ಕಿಲ್ಲ ! ಎಂತಹ ಅಸಹನೀಯ ಭಾವನೆ. ಆದರೂ ಈ ಯೋಚನೆ ನನ್ನನ್ನು ಪಿಶಾಚಿಯಂತೆ ಬೆಂಬತ್ತಿದೆ. ನಿತ್ಯವೂ ಸಾಯಂಕಾಲ ಮೈದಾನಿಗೆ ಹೋಗುತ್ತೇನೆ. ಅಲ್ಲಿ ನಿರ್ಜನವಾದ ಒಂದು ಮೂಲೆಯಲ್ಲಿ ಹೆಸರಿಗೆ ಒಂದು ಪುಸ್ತಕವನ್ನು ಹಿಡಿದುಕೊಂಡು ಕುಳಿತುಕೊಳ್ಳುತ್ತೇನೆ . ಅಯ್ಯೋ! ಮುಂಚಿನ ಆ ಏಕಾಗ್ರತೆ ಈಗ ಎಲ್ಲಿ ಹೋಗಿದೆ? ಮದುವೆಯ ಮೊದಲೇ ಈ ಯೋಚನೆಗಳು ಹೊಳೆದಿದ್ದರೆ

**ದಶಂಬರ ೧೫, ೧೯೨೯.**

ನನ್ನ ಮನಸ್ಸಿನ ಬೇಸರವನ್ನಾಕೆಯೆಂತೋ ಅರಿತುಕೊಂಡಂತಿದೆ. ಇಂದು ಮಧ್ಯಾಹ್ನ ಸಮಯದಲ್ಲಿ ಆಕೆ ಸಂದರ್ಭಹಿಡಿದು ನನ್ನನ್ನು ಕೇಳಿದಳು: "ಬಹಳ ದಿನಗಳಿಂದ ಯಾವುದೋ ಒಂದು ಮಹಾ ಯೋಚನೆಯಲ್ಲಿ ಬಿದ್ದಿರುವ ಹಾಗೆ ಕಾಣುತ್ತದೆ. ಮೈಯಲ್ಲಿಯೂ ಸೊರಗುತ್ತ ಬಂದಿದ್ದೀರಿ." ನಾಲಗೆ ಹೃದಯದೊಳಗಿನ ಬಂದೀಭಾವಗಳನ್ನು ವಿಸರ್ಜಿಸಲು ಹಾತೊರೆಯುತ್ತಿತ್ತು— ಮಹತಾ ಪ್ರಯತ್ನೇನ ವಿದ್ರೋಹಿ ಜಿಹ್ವೆಯನ್ನು ವಶದಲ್ಲಿಟ್ಟುಕೊಂಡು "ಏನೂ ಇಲ್ಲ"ವೆಂದು ಹೇಳಿ

ಬಿಟ್ಟೆ. ಮೋರೆಯ ಹಾವವನ್ನು ಯಥಾಸ್ಥಿತಿಯಲ್ಲಿರಿಸಿಕೊಳ್ಳಲು ಬಹು ಕಷ್ಟವಾಯಿತು.

ಅವಳಿಗೆ ನನ್ನ ಮನಸ್ಸಿನ ಉದ್ವೇಗವನ್ನು ಬಿಚ್ಚಿ ಹೇಳಿಬಿಡಲೇ? ಅವಳು ನನ್ನ ಕೂಡೆ ಸತ್ಯವನ್ನು ಹೇಳುವಳೇ? ..... ಎಂದಿಗೂ ಹೇಳಲಿಕ್ಕಿಲ್ಲ .? ಎಂತಹ ಪರಿಸ್ಥಿತಿ . ಅಯ್ಯೋ!

**ದಶಂಬರ ೨೦, ೧೯೨೯**

ಹೃದಯವು ಛಿನ್ನ ಭಿನ್ನವಾಗಿದೆ — ಮನಸ್ಸು ಹತ್ತಿಯ ರಾಶಿಯ ಹಾಗೆ ಎತ್ತೆತ್ತಲೋ ಹಾರಿ ಹೋಗತೊಡಗಿದೆ ಈ ಬಿರುಗಾಳಿಯಲ್ಲಿ ನನ್ನ ದೀಪವು ಇನ್ನೂ ನಂದಲಾರದೆ?

ನಿಷ್ಕರುಣ ಸತ್ಯವು ಇಂದು ಬರಸಿಡಿಲಿನ ಹಾಗೆ ನನ್ನ ಮೇಲೆ ಬಂದೆರಗಿದೆ . . ನನ್ನ ಕುರೂಪವು ನನ್ನನ್ನು ನನ್ನ ಹೆಂಡತಿಯ ಪ್ರೇಮದಿಂದ ವಂಚಿಸಿದೆ ! ತಿಳಿಯಿತು ಆಕೆ ನನ್ನನ್ನು ಪ್ರೀತಿಸುವುದಿಲ್ಲ .! . ನನ್ನಲ್ಲಿ ಸೌಂದರ್ಯವಿಲ್ಲ! ಹಾಯ್‌ರೇ!

ಈ ನಿಷ್ಠುರ ಸತ್ಯವನ್ನರುಹುವುದಕ್ಕೇ ನನ್ನ ಕುತೂಹಲವು ನನ್ನನ್ನೀವರೆಗೆ ದೂಡುತ್ತ ಬಂತೇ!

ಈವೊತ್ತು ನಂಜೆ ಎಂದಿನ ಸಮಯಕ್ಕೆ ಒಂದು ಗಂಟೆ ಮುಂಚಿತವಾಗಿ ಮನೆಗೆ ಬಂದೆ ನನ್ನ ಹೃದಯದ ಧ್ವನಿಯು ಕರೆದು ಹೇಳಿತು . 'ಈ ದಿನ ಸತ್ಯವು ತನ್ನ ನಗ್ನರೂಪವನ್ನು ನಿನ್ನ ಮುಂದೆ ನಿಲ್ಲಿಸುವುದು . ' ಎಂದು.

ನಿಶ್ಶಬ್ದವಾಗಿ ನನ್ನ ಕೋಣೆಯೊಳಗೆ ಹೋಗಿ ಕುಳಿತೆ ಮನೆಯಲ್ಲಿ ಯಾರೂ ಇದ್ದಂತೆ ಕಾಣಲಿಲ್ಲ. ಉಸಿರು ಹಿಡಿದು ನಿರೀಕ್ಷಿಸಿದೆ . .. ಒಂದು ನಿಮಿಷ ಕಳೆಯಿತು. ಅಲ್ಲಿಂದ ಎದ್ದು ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ಹೂದೋಟಕ್ಕೆ ಹೋಗಿ ಒಂದು ಆಸನದ ಮೇಲೆ ಕುಳಿತೆ. ಕೈಯಲ್ಲಿ ಪತ್ರಿಕೆಯಿತ್ತು.

ಫಕ್ಕನೆ ಶ್ರೀನಾಥನ ಕೋಣೆಯ ಪಕ್ಕದಲ್ಲಿರುವ ಖಾಲಿ ಕೋಣೆಯಿಂದ ಹೂದೋಟಕ್ಕೆ ತೆರೆಯುವ ಬಾಗಿಲು ತೆರೆಯಿತು. ನೋಡಿದೆ, ನನ್ನ ಹೆಂಡತಿ ಹೊರಗೆ ಬಂದಳು.

ತಲೆ ಕೆದರಿತ್ತು, ಕಣ್ಣುಗಳು ಹೆದರಿದ್ದುವು, ಹಣೆ ಬೆವರುಸೇರಿತ್ತು ...!

ಆಕೆಗೆ ನಾನಿದ್ದುದು ತಿಳಿಯಲಿಲ್ಲ. ಹಾಗೆಯೇ ಸರಿದುಹೋದಳು. ಆಕೆ ಹೋದ ಬಳಿಕ ನಾನು ನನ್ನ ಕೋಣೆಯಿಂದಾಗಿ ಶ್ರೀನಾಥನ ಕೋಣೆಗೆ ಹೋದೆ. ಅವನು ದೀಪ ಹೊತ್ತಿಸುತ್ತಿದ್ದ . ಮೋರೆ ನೋಡಿದೆ, ಬೆವರು ಪೇರಿತ್ತು . ಎದೆ ಬಡಿಯುವ ಸ್ವರ ನನಗೆ ಕೇಳಿಸುವಂತೆ ಭಾಸವಾಯಿತು.

ಪುನಃ ಮಹಾಪ್ರಯತ್ನದಿಂದ ಎಸೆಯನ್ನು ಆಳಿಕೊಂಡೆ. ಬಂದುದಕ್ಕೆ ಏನೋ ಕೇಳಿ, ಏನೂ ಅರಿಯದವನಂತೆ ನನ್ನ ಕೋಣೆಗೆ ಪೋಗಿ ಕುಳಿತೆ.

ರಾತ್ರಿ ಊಟಮಾಡಿಲ್ಲ. ಎಲ್ಲಿಯೋ ಟೀಪಾರ್ಟಿಯಿತ್ತೆಂದೂ ಹಸಿವೆಯಿಲ್ಲೆಂದೂ ಹೇಳಿಬಿಟ್ಟಿದ್ದೇನೆ.

ನನ್ನದೆಯಲ್ಲಿ ಪ್ರತೀಕಾರಾಗ್ನಿ ಜ್ವಲಿಸುತ್ತಿದೆ . ಕೊಲ್ಲುವೆನು . . ಇಬ್ಬರನ್ನೂ ಕೊಂದು ಹಾಕುವೆನು .!

**ದಶಂಬರ ೨೧, ೧೯೨೯**

ನಿನ್ನೆ ರಾತ್ರೆ ಇಡೀ ನನ್ನಲ್ಲಿ ಪ್ರತೀಕಾರದ ವಿಚಾರವು ಸುಳಿಯುತ್ತಾ ಇತ್ತು. ಈವೊತ್ತು ಹಗಲು ಕೂಡಾ ಅದೇ ಭಾವನೆಯು ನನ್ನ ಮಿದುಳನ್ನು ಆವರಿಸಿತ್ತು. ಆದರೆ ಈಗ ನನ್ನ ಮನಸ್ಸು ಪರಿವರ್ತಿಸುತ್ತಾ ಇದೆ.

ಇಲ್ಲಿ ನನ್ನ ಪಕ್ಕದಲ್ಲಿ ಆಕೆ ನಿದ್ರೆಯಲ್ಲಿ ಮಗ್ನಳಾಗಿದ್ದಾಳೆ ಒಂದು ಗಳಿಗೆ ಆಕೆಯ ಮೊಗವನ್ನು ದಿಟ್ಟಿಸಿ ನೋಡಿದೆ — ಅದೇ ಆ ಬೊಟ್ಟಿಲ್ಲದ ಸೌಂದರ್ಯ. ಅದೇ ಆ ಮೋಹಕತೆ — ಈ ದಿನಗಳಲ್ಲಿ ನಡೆದುದು ಒಂದು ಗಳಿಗೆ ಮರೆತುಹೋಯಿತು. ಅದೇ ಆಕರ್ಷವು ನನ್ನನ್ನು ಸೆಳೆದು

ಆಕೆಯ ಮೊರೆಯ ಮೇಲೆ ಒಂದು ಮುತ್ತನ್ನು ಮುದ್ರಿಸಿತು. ಮರುಕ್ಷಣದಲ್ಲಿ ನನಗೆ ನನ್ನೊಳಗೇ ಒಂದು ಕಳ್ಳತನವು ಮಿಸುಕುತ್ತಿರುವಂತೆ ಭಾಸವಾಯಿತು. ನಾನು ಆ ಸೌಂದರ್ಯ ರಾಶಿಯನ್ನು ಕೊಳ್ಳೆಹೊಡೆಯಲು ಅರ್ಹನೇ?........ ಯಾವ ಆಧಾರದಿಂದ, ಯಾವ ಅಧಿಕಾರದಿಂದ ನಾನು ಈ ಸೌಂದರ್ಯ ವನ್ನುಪಭೋಗಿಸಲಿ?

ಒಂದೊಂದಾಗಿ ವಿಚಾರಗಳು ಪುಂಖಾನುಪುಂಖವಾಗಿ ಮುತ್ತಿದವು. ನಾನು ಈ ಯುಗಲವನ್ನು ಕೊಲ್ಲುವ ನಿರ್ಧಾರ ಮಾಡಿದ್ದೇನೆ. ಆದರೆ ಇದರಲ್ಲಿ ಎಷ್ಟು ನ್ಯಾಯವಿದೆ? ನಾನು ಕುರೂಪಿಯಾಗಿದ್ದು ಸೌಂದರ್ಯ ರಾಶಿಯನ್ನು ಆಶಿಸಿದುದು. ಅದನ್ನು ತೆಗೆದುಕೊಂಡು ಬಂದು ನನ್ನ ಭಂಡಾರದಲ್ಲಿ ಬಚ್ಚಿಟ್ಟದ್ದು— ನಾನು ಮಾಡಿದ ತಪ್ಪು— ಅದಕ್ಕಾಗಿ ಆಕೆ ಯನ್ನು ಶಿಕ್ಷಿಸಬೇಕೇ? ಇಲ್ಲ! ಕೊಲ್ಲುವುದಿಲ್ಲ ನನ್ನ ಈ ಕುರೂಪ— ನನ್ನ ಈ ವೇದನೆ— ಇವುಗಳೊಳಗೆ ವಿವಾಹವಾಗಿದೆ . . ಅವುಗಳನ್ನು ಕಟ್ಟಿಕೊಂಡು ನಾನು ನನ್ನ ಮೃತ್ಯುವಿನ ಕಡೆಗೆ ಹೋಗುವೆನು.

ಹೋಗುವೆನು ಅಂತ್ಯಕಾಲದಲ್ಲಿ— ಅದು ಬಹಳ ಹತ್ತಿರವಿರು ವಂತೆ ತೋರುತ್ತಿದೆ.—ಏಕೆ ಎರಡು ಪ್ರೇಮಾಬದ್ಧ ಹೃದಯಗಳಿಗೆ ಚೂರಿಹಾಕಲಿ? ಸಹಿಸುವೆನು ಉಳಿದ ಜೀವನವನ್ನೆಲ್ಲ ಸಹಿಸುವೆನು.

**ಜನವರಿ ೧೨, ೧೯೩೦**

ನಾನೀಗ ಮಾನವ ಸಮಾಜದಿಂದ ದೂರವಾಗಿದ್ದೇನೆ. . ನನ್ನಲ್ಲಿ ಯಾವುದೋ ಒಂದು ತೆರದ ಕ್ಷಮಾಭಾವವು ಉತ್ಪನ್ನವಾಗಿದೆ. ಮಿತ್ರರ ಕೂಡೆ ಹೆಚ್ಚಾಗಿ ಸೇರುವುದಿಲ್ಲ ನೊರಗುವಿಯೇನೆಂದು ಕೇಳಿದರೆ ಎಲ್ಲಾ ದರೂ ಸತ್ಯವನ್ನು ಹೇಳಿಬಿಡುವ ಸಂದರ್ಭ ಬಂದರೆ ಎಂಬ ಭೀತಿಯಿಂದ.

ಕರುಳಿನೊಳಗೆ ಅನಂತವಾದ ಜ್ವಾಲೆಯೊಂದು ಬೇಯುತ್ತಿರುವುದು. ಈಗೀಗ ಪ್ರಾಚೀನ ಯೋಗಿಗಳ ಕಡೆಗೆ ನನ್ನ ಮನಸ್ಸು ಹರಿದಿದೆ— ಉಪ ನಿಷತ್ತು, ಭಗವದ್ಗೀತೆ, ರಸ್ಕಿನ್, ಟೋಲ್‌ಸ್ಟೋಯ್, ಗೋಥೇ ಇವು ನನ್ನ

ಸಂಗಾತಿಗಳಾಗಿವೆ. ಆದರೂ ಸಾಧ್ಯವಿದ್ದಷ್ಟು ನನ್ನ ಹಳೆಯ ವರ್ತನೆಗಳನ್ನೇ ಮಾಡುತ್ತ ಬಂದಿರುತ್ತೇನೆ.

**ಜನವರಿ ೩೧, ೧೯೩೦.**

ಇಂದು ಸಂಧ್ಯೆಯು ಸುಂದರವಾಗಿತ್ತು. ಆದರೆ ನಾನು ಈ ಸಮಯ ಮೈದಾನಿನ ಬಂಡೆಯಲ್ಲಿ ಕುಳಿತು ತತ್ವ ಜಿಜ್ಞಾಸೆ ಮಾಡುತ್ತಿದ್ದೆ. ಹಿಂದಿನ ಹಾಗಿದ್ದರೆ ಈ ಸಮಯ ನನ್ನ ನಲ್ಲೆಯ ಸಂಗತಿಯಲ್ಲಿ ಕಾಲಕ್ಷೇಪ ಮಾಡುತ್ತಿದ್ದೆ. ಆದರೆ ಈಗ ನನಗೆ ಆ ಅಧಿಕಾರವಿಲ್ಲೆಂದು ತೋರುತ್ತದೆ. ಹಗಲಿರುಳುಗಳು ಒಂದನ್ನೊಂದು ಎದೆಗೆ ಅವಚಿಕೊಳ್ಳುತ್ತಿರುವಾಗ ನನ್ನ ಅಯಾಚಿತ ಸಂಗತಿಯು ಆ ಆಕಾಂಕ್ಷಾಪ್ರತಿಭ ಹೃದಯಗಳಿಗೆ ವಿಯೋಗ ದುಃಖವನ್ನುಂಟುಮಾಡಿದರೆ !

**ಮಾರ್ಚಿ ೨೨, ೧೯೩೦,**

ನಾನು ಕುರೂಪಿ— ನಾನು ಕುರೂಪಿ— ನಾನು ಕುರೂಪಿ! . ಹಾಯ್‌ರೇ! ನಾನು ಕುರೂಪಿ! ಹೃದಯವೇ! ಜ್ವಲಿಸು! ಜ್ವಲಿಸು! . ಓಫ್!

* * * *

**ಮಾಧುರೀ ವಾರಪತ್ರಿಕೆ, ತಾ. ೨೫ ಎಪ್ರಿಲ್, ೧೯೩೦**

“ಕರ್ಣಾಟಕದ ಪ್ರಸಿದ್ಧ ಕವಿಗಳೂ ಶೃಂಗಾರರಸದ ಸಾಕ್ಷಾತ್ಕರ್ತರೂ ಆದ ಶ್ರೀಯುತ ವೆಂಕಟೇಶ್ವರರಾಯರು ಮೊನ್ನೆ ತಾ ೨೨ರಲ್ಲಿ ಮನೋಭ್ರಾಂತಿಯಿಂದ ಆವಿಷ್ಟರಾಗಿ ಲುನೇಟಿಕ್ ಅಸಾಯಲಂಗೆ ಪ್ರವೇಶ ಮಾಡಲ್ಪಟ್ಟರು. ಈ ವಾರ್ತೆಯು ಕರ್ಣಾಟಕ ಸಾಹಿತ್ಯದ ಪ್ರತಿಯೊಬ್ಬ ಅಭಿಮಾನಿಗೂ ದುಃಖವನ್ನುಂಟುಮಾಡದೆ ಇರದು.”

# ಹುಚ್ಚುಚ್ಚು

ಶ್ರೀ ಎಂ. ವಿ. ಹೆಗ್ಡೆ

★

ಇವರು ಉಡುಪಿಯಲ್ಲಿ ಪ್ರಕಟವಾಗುತ್ತಿರುವ 'ಅಂತರಂಗ' ವಾರಪತ್ರಿಕೆಯ ಸಂಪಾದಕರು. ಇವರ ಅನೇಕ ಕತೆ— ಕವನ— ನಾಟಕ— ವಿಮರ್ಶೆ— ಲೇಖನಗಳು ಬೇರೆ ಬೇರೆ ಪತ್ರಿಕೆಗಳಲ್ಲಿ ಅಚ್ಚಾಗಿವೆ. ಒಳ್ಳೆಯ ಕವಿಗಳು— ಕತೆಗಾರರು— ವಿಮರ್ಶಕರು— ನಾಟಕಕಾರರು— ಸರಸವಿನೋದಿಗಳು. ಕಸವನ್ನು ರಸವನ್ನಾಗಿ ಮಾಡಬಲ್ಲ ಶಕ್ತಿಯುಳ್ಳವರು. ಹರಟೆಯನ್ನು ಬರೆಯುವುದರಲ್ಲಂತೂ ನಮ್ಮಲ್ಲಿ ಇವರನ್ನು ಮೀರುವವರೆ ಇಲ್ಲವೆನಬಹುದು. ನಗೆಮಾತುಗಳಿಗೆ ಇವರ ಲೆಕ್ಕಣಿಕೆಯೆ ಒಂದು ತವರೂರು!

ಕಮಲ ಚಹಾ ನೊಪ್ಪು ಕುದಿಸಿ ಸಕ್ಕರೆ ಹಾಕಿಯೂ ಆಯಿತು. ಅಬ್ಬಾ ಅವಳ ಭರವಸೆಯೇ! ವಿಶ್ವನಾಥ ಇನ್ನೂ ಬಂದಿಲ್ಲ. ಅವಳೊಮ್ಮೆ ಬಾಗಿಲ ಬಳಿಗೆ ಹೋಗಿ ಇಣಿಕಿ ಬಂದುದೂ ಇಲ್ಲ. ಗೋಡೆ ನೋಡಿಕೊಂಡುದಿದೆ; ಅಲ್ಲಿದ್ದ ಗಡಿಯಾರವನ್ನು ಕಂಡುದಿದೆ. ಗಡಿಯಾರದ ಮುಳ್ಳು ತಿರುಗುತ್ತಲೇ ಇದೆ, ಆದ್ದರಿಂದ ತಾನು ಮಾಡಿದುದು ಹೊತ್ತಿಗೆ ಸರಿಯಾಗಿಯೇ ಇದೆ. ಆದರೆ ವಿಶ್ವನಾಥ? 'ಅವರು ಬಂದಿಲ್ಲ – ಘಂಟೆಯೂ ಐದೂವರೆ ಹೊಡೆದಿಲ್ಲ. ಅದು ಹೊಡೆಯುವಾಗ ಅವರು ಬರುತ್ತಾರೆ. ಬಾರದೆ ಹೋದರೆ? ಹೋದಾರು— ಹಾಗೆ ತಡಮಾಡುವಷ್ಟು ಧೈರ್ಯಬೇಕಲ್ಲ! ಬಾರದಿದ್ದರೆ ನಾನರಿಯೆ— ಹಾಲನ್ನೂ ಹಾಕಿ ಚಹಾ ಪಾತ್ರೆಯನ್ನು ಅಲ್ಲೇ ಮೇಜಿನ ಮೇಲೆ ಇಟ್ಟು ಬಿಡುತ್ತೇನೆ, ನಾನು ಒಲೆಯ ಬಳಿಯಲ್ಲೇ ಕುಳಿತು ಬಿಡುತ್ತೇನೆ. ಹೂಂ. ಬಿಸಿ ಚಹಾ ಬೇಕಾದರೆ ಹೊತ್ತಿಗೆ ಸರಿಯಾಗಿ ಬರಲಿ; ಹೊತ್ತು ತಪ್ಪಿಸಿ ಬಂದರೆ ದೊರೆತುದನ್ನೇ ನೆಕ್ಕಲಿ. ಮತ್ತು ನಾನು ಅವರು ಬಂದ ಮೇಲೂ ಒಲೆಯ ಬಳಿಯಲ್ಲೇ ಕಾಲಹರಣಮಾಡಬೇಕೆ? ಆದರೆ— ಅವರು ಈಗ ಓಡಿಬರುವದಿಲ್ಲವೆ? ಯಾರಾದರೂ ಹಾದಿಯಲ್ಲಿ ತಡೆದರೆ ದೂಡಿಕೊಂಡೇ ಬಂದಾರು!'

ಘಂಟೆ ಐದೂವರೆಯನ್ನು ಸೂಚಿಸಲು ಒಮ್ಮೆ ಹೊಡೆಯಿತು; ಚಹಾ ಪಾತ್ರೆಯೊಳಕ್ಕೆ ಹಾಲು ಬಿತ್ತೇ ಬಿತ್ತು. ಆಗಲೇ ಹೊರ ಚಾವಡಿಯಲ್ಲಿ ಒಂದು 'ಧಢಾರ್' ಮತ್ತೊಂದು 'ಧುಡುಂ' ಸದ್ದು.—ಒಂದು ಕುರ್ಚಿಯನ್ನು ರಭಸದಿಂದೆಳೆದುದು; ಮತ್ತೊಂದು ಅಷ್ಟೇ ರಭಸದಿಂದ ಕಾಲನ್ನು ಮೇಜಿನ ಮೇಲೆತ್ತಿ ಹಾಕಿದುದು. ಕಮಲನ ಮುಖದಲ್ಲೊಮ್ಮೆ ಕಿಸಕ್ಕನೆ ನಗೆ ಮಿಂಚಿತು.

. "ಕಮಲೂ"

ಉತ್ತರವಿಲ್ಲ.

"ಕಮಲೂ ೯ ೯ ೯"

"..............."

"ಕಮಲು ಉ ಉ, ಕಮಲು ಊ ಊ, ಉ ಊ, ಉ ಊ," ಈ ರಾಗಕ್ಕೆ ಸರಿಯಾಗಿ ಮೇಜಿನ ಮೇಲೆ ಕಾಲಬಡಿತ!

"ಬಾಯಿಹಾಡು ಮತ್ತು ತಬ್ಲಾ ತಾಡನವಾಯಿತು. ಜತೆಗೆ ಫಿಡ್ಲಾ ಬೇಡವೆ? ಆ ಬೆಕ್ಕಿನ ಮರಿಯನ್ನೆತ್ತಿ ತೊಡೆಯಲ್ಲಿಟ್ಟುಕೊಳ್ಳಬಾರದೆ? ಸಂಗೀತ ಕಚೇರಿ ಸರ್ವಾಂಗಪೂರ್ಣವಾದೀತು."

"ಹಾಂ, ಈಗ ದೇವಿಯೊಲಿದಳು! ಭಜನೆಗೊಲಿಯುದ ದೇವಿಯಿದ್ದಾಳೆಯೆ? ಆಗಲಿ, ಇನ್ನಾದರೂ ತೀರ್ಥ ಪ್ರಸಾದವಾಗಲಿ— ಚಹಾತಟ್ಟೆಯಿತ್ತ ಬರಲಿ!"

"ಚಹಾ ಬರುವದಾದರೆ ಬರಲಿ! ಆದರೆ ಅದಕ್ಕೆ ಕಾಲಿಲ್ಲವಂತೆ. ಕುಡಿಯುವವರೇ ಅದಿದ್ದಲ್ಲಿಗೆ ಬರಬೇಕಂತೆ!"

"ಇಲ್ಲ. ನಾನಲ್ಲಿ ಬರುವದಿಲ್ಲ."

"ಹಾಗಾದರೆ ಅದೂ ಅಲ್ಲಿ ಬರುವದಿಲ್ಲ."

"ಬಾರದಿದ್ದರೆ ಹೋಗಲಿ. ಆಂಜನೇಯ ರೆಸ್ಟೋರೆಂಟಿನ ಚಹವಾದರೆ, ಹೋಗಿ ಕುರ್ಚಿಯಲ್ಲಿ ಕುಳಿತುಕೊಂಡೊಡನೆ ಅದಾಗಿ ಓಡಿ ಬರುತ್ತದೆ."

"ಹಾಗೇನೇ ಈ ಚಹಾವಿದ್ದಲ್ಲಿಗೆ ಓಡಿಬರುವವರೂ ಯಾರಾದರೂ ದೊರೆತಾರು."

"ಹೂಂ. ಹಾಗಾದರೆ ನಾನು ಹೊರಟೆ"— ಮೇಜು ಕುರ್ಚಿಗಳು ಬೀಳ್ಕೊಡುವ ಸಂಭ್ರಮ ತೋರಿಸಿದುವು.

"ನೀವು ಹೊರಟರೆ ಚಹಾವೂ ಹೊರಟಿತು."

ವಿಶ್ವನಾಥ ಬಾಗಿಲು ಸಮೀಪಿಸುವಾಗ ಚಹಾತಟ್ಟೆ ಮೇಜಿನ ಮೇಲೆ ಬಂದು ನಿಂತಿತು. ವಿಶ್ವನಾಥ ವಿಜಯಿಯಾಗಿ ಹಿಂದಿರುಗಿ ಕುರ್ಚಿಯ ಕಡೆ ತೆರಳಿದ.

ಆ ಮೇಜು ಕುರ್ಚಿಗಳು ಗಂಧದ ಮರದಿಂದಾದುವೇನೋ— ಸದಾ ಸವೆಯುವುದೊಂದೇ ಅವುಗಳಿಗೆ ಗತಿ ಅಲ್ಲಿ ಚಿಕ್ಕ ಪರಿಮಾಣದ ಕುಸ್ತಿಯೊಂದು ನಡೆಯಿತು

" ಊಂಹೂ, ನಾನರಿಯೆ! ಬಿಳೀ ಸೀರೆಯ ಮೇಲೆ ಚಹಾ ಬಿದ್ದರೆ ಗುರುತು ಹೋಗುವದೇ ಇಲ್ಲ. ನಂಗೊತ್ತಿಲ್ಲ!"

"ನಂಗೊತ್ತಿದೆ— ಈ ಮಾತು ಸುಳ್ಳು. ನಿನ್ನ ಚಹಾ ಇದ್ದಲ್ಲಿಂದ ಹೋಗುವದೇ ಇಲ್ಲ— ಎಂದು ಈಗ ಒಮ್ಮೆ ಹೇಳಿದಿ, ಅದು ಸುಳ್ಳಾಯಿತು— ಇದು ಹೇಗಾಗುತ್ತದೋ ನೋಡೋಣ"

ಕಮಲನ ಗಲ್ಲ ಮತ್ತು ನೆರಗಿನ ಮೇಲೆ ದಪ್ಪ ಚಹಾದ ಲೇಪವಾದುದೇ ತಡ· "ಇದು ಸರಿ. ಚಹಾ ಬಿದ್ದರೆ ಎಂತಹ ಕಲೆ ಮೂಡುತ್ತದೆಂಬುದನ್ನು ನೋಡಬೇಕು ನಿಜ. ಆದರೆ ಈ ಸೀರೆ ಅಚ್ಚ ಬಿಳಿಯಲ್ಲ-- ಆ ಶರ್ಟಿಗೆ ಹಾಕಿನೋಡೋಣ."— ವಿಶ್ವನಾಥನ ಭುಜದ ಮೇಲೂ ಚಹಾಭಿಷೇಕವಾಯಿತು!

"ಹ ಹ ಹ ಹ ಹ!"—ವಿಶ್ವನಾಥ!

"ಹಿ ಹಿ ಹಿ ಹಿ ಹಿ!"—ಕಮಲ.

"ಎಲೆಲಾ ನೀನೇಕೆ ನಗೆಯಾಡಿದಿ? ನಾನಲ್ಲವೇ ಗೆದ್ದುದು?"

"ಹೇಗದು? ನಿಮ್ಮನ್ನು ಗೆಲ್ಲಲು ನಾನು ಬಿಟ್ಟೆನೆ?"

"ನನ್ನನ್ನು ಒಮ್ಮೆ ಮಾತ್ರ ಗೆಲ್ಲಲು ನೀನು ಬಿಡಲಿಲ್ಲ— ಹೌದು; ನಿನ್ನಿಂದಾಗಿ ನನಗೆ ಇಮ್ಮಡಿ ವಿಜಯ."

"ಓಹೋಹೋ! ಅದು ಹೌದು. ಒಂದು ಸೀರೆ ಮತ್ತು ಒಂದು ಶರ್ಟನ್ನು ನಾಳೆ ಹೊಸತಾಗಿ ತಂದರಾಯಿತು. ಆದ್ದರಿಂದ ನಿಮಗೆ ದುಬಾರಿ ವಿಜಯ."

"ಅದು ಯುದ್ಧ ಮುಗಿದ ಮೇಲೆ. ಈಗ ಇವೆರಡನ್ನೂ ನೀನು ಮಡಿಮಾಡಬೇಕಾಗಿ ಬಂದುದರಿಂದ ನಿನಗೆ ದುಬಾರಿ ಸೋಲು— ನನ ಗಷ್ಟೇ ಬಾರಿ ಜಯ"

"ಆಂಹಾ. ನಾನು ಮಾತ್ರ ಅದನ್ನು ಒಗೆಯುವಂತಿಲ್ಲ. ದೋಬಿಗೆ ಕೊಡುತ್ತೇನೆ."

"ಹಾಗಾದರೆ ನಾವಿಬ್ಬರೂ ಒಟ್ಟಾಗಿ ಸೋಲಿಸಿದುದು ದೋಬಿಯನ್ನು. ಆದ್ದರಿಂದ ಇಬ್ಬರೂ ಒಟ್ಟಿಗೆ ನಗೋಣ ಹಾಂ. ಆರಂಭಿಸುವ— ಹ ಹ ಹ ಹ— ತಡಿ— ಮೂರು ಹೇಳುವಾಗಲೇ ಇಬ್ಬರೂ ತೊಡಗಬೇಕು. ಒಂದು . ಎರಡು "

"ಊಹೂಂ. ನಾನು ನಗುವದಿಲ್ಲ ನೀವು ಮಾಡಿದಂತೆ ನಾನು ಮಾಡುವದೇ ಇಲ್ಲ. ನೀವು ನಕ್ಕರೆ ನಾನು ಅಳುತ್ತೇನೆ; ನೀವು ಅತ್ತರೆ ನಾನು ನಗುತ್ತೇನೆ."

"ಅದಾಗದು. ನನ್ನಂತೆಯೇ ನೀನೂ ಮಾಡಬೇಕು"

"ಮಾಡುವುದಿಲ್ಲ."

"ನಿನ್ನಿಂದ ಮಾಡಿಸುತ್ತೇನೆ."

"ನೋಡುವ ಹಾಗಾದರೆ."

"ಹ ಹ ಹ ಹ" — ವಿಶ್ವನಾಥನ ಸ್ವನಿರ್ಮಿತ ನಗು.

"ಯೀ ... .. ಯಿಹೀ ..... ಯೀ" ಕಮಲನ ಕೃತಕ ಅಳು.

"ಹೆ ಹೆ ಹೆ ಹೆ ಹೆ ಹೆ" — ಆನಂದದಿಂದ ಎದೆಯೊತ್ತಿಕೊಂಡ ವಿಶ್ವನಾಥ!

"ಯೀಯೀ .... . ಯೀಯೀ.. .. ." — ದುಃಖದಿಂದ ಕಣ್ಣುಜ್ಜಿಕೊಂಡಳು ಕಮಲ!

"ಹಾಗಾದರೆ ನಾನೂ ನಿನ್ನೊಟ್ಟಿಗೆ ಅಳುತ್ತೇನೆ. ಯೀಯೀ ಯೀಯೀ! "

"ಆಗ ನಾನು ನಗುತ್ತೇನೆ . . ಹ ಹ ಹ ಹ ಹ ಹ!"

"ಯೀಂ ಯೀ .. ಯಿಹಿಹೀ... "—ವಿಶ್ವನಾಥ.

"ಹ ಹ ಹ ಹ . . ಹಿಂಹಿಂಹಿಂ . ಹೆಹೆಹೆ"— ಕಮಲ.

"ನಮಸ್ಕಾರ ಬಂತು ರಾಯರಿಗೆ"— ಕಮಲನ ತವರೂರಿನ ಜನವೊಂದು ಒಳಗೆ ಕಾಲಿಟ್ಟಿತು.

ಕಮಲ ನಗುವದನ್ನು ಫಕ್ಕನೆ ನಿಲ್ಲಿಸಿ "ಈಗ ತಾನೇ ಬಂದಿರಾ? ಕುಳಿತುಕೊಳ್ಳಿ" ಎಂದು ಮುಂದಾದಳು.

ವಿಶ್ವನಾಥ ಮತ್ತೂ "ಯೀೀೀ ....." ಸ್ವರಕೊಟ್ಟ.

ಬಂದ ಮನುಷ್ಯ ಬೆಚ್ಚಿಬಿದ್ದ. ಕಮಲನ ಮುಖನೋಡಿ "ರಾಯರೇನದು?" ಎಂದು ವಿಚಾರಿಸಿದ.

ಕಮಲ ಈ ರೋಗ ಆಗಲೂ ಬೆಳೆಯುವದೆಂದು ಊಹಿಸಿರಲಿಲ್ಲ. ನಾಚಿಕೊಂಡು "ಏನಿಲ್ಲ, ಸುಮ್ಮಗೆ" ಎಂದವಳು ಪತಿಯ

ಮುಖ ನೋಡಿದಳು. "ಇದೆಂತಹ ಮರ್ಜಿ? ಅವರು ಬಂದದ್ದು ಕಾಣುವ ದಿಲ್ಲವೆ?"

"ಯೀ ಯೀ ಯೀ ೀ ೀ.... .." ವಿಶ್ವನಾಥನ ಯಥಾಸ್ವರ!

"ಏನು ರಾಯರೇ, ಯಾಕೆ ಹಾಗೆ ಮಾಡುತ್ತೀರಿ?" ಯಾವುದೂ ಬಗೆ ಹರಿಯದೆ ಅತಿಥಿ ತಾನಾಗಿ ಪ್ರಶ್ನಿಸಿದ.

"ಯೀ—. ಅವಳು ನನ್ನ ಮುಖ, ಮೈಮೇಲೆಲ್ಲಾ ಬಿಸಿ ಚಹಾ ಚೆಲ್ಲಿದಳು. ಯೀ ಯೀ . ಸಾಮಾನು ತರಿಸಿ ಹಾಕದವರು ಚಹಾ ಕುಡಿಯುವದೆಲ್ಲಿಂದ ಎಂದು ಬೈದಳು ಯೀ . ನನಗೇಕೆ ಬೇಕಿತ್ತು ಈ ದೊಡ್ಡವರ ನಂಟಸ್ತಿಕ! ಯೀ!"— ವಿಶ್ವನಾಥ ಹೀಗನ್ನುವಾಗ ಯಾವ ದುರ್ಘಟನೆಯ ನೆನಪು ಮಾಡಿಕೊಂಡನೋ, ಆ ಮುಹೂರ್ತದಲ್ಲಿ ಅವನ ಮುಖದಲ್ಲಿ ನಿಜವಾದ ದುಃಖ ಮೂಡಿದಂತೆ ತೋರಿತು ನಾಲದುದಕ್ಕೆ ಅಂಗಿಯೊದ್ದೆಯಾದ ಸಾಕ್ಷ್ಯ ಬೇರೆಯಿದೆ. ಬಂದ ಮಹಾನುಭಾವ ಒಮ್ಮೆಗದನ್ನು ನಂಬಿಬಿಟ್ಟ

ಆ ದೃಶ್ಯವನ್ನು ನೋಡಿ ಕಮಲನ ಎದೆಗೆ ಮುಳ್ಳು ಸುರಿದಂತಾಯಿತು ಫಕ್ಕನೇ ಅಳುವುಕ್ಕಿಬಂತು. ಅವಳು ಅಲ್ಲೇ ಮೂಲೆ ಹಿಡಿದು ಕುಳಿತು ಸೆರಗಿನಿಂದ ಕಣ್ಣೊಜ್ಜಿಕೊಳ್ಳುತ್ತಾ— "ನರನಕ್ಕೊಂದು ಮಿತಿ ಬೇಕು. ಸಮಯ ಸಂದರ್ಭವೆಂದಿಲ್ಲ— ಇದ್ದವರು ಬಂದವರೆಂದಿಲ್ಲ— ಯಾವಾಗಲೂ ಒಂದೇ ರೀತಿ! ಇದನ್ನು ಕೇಳಿದವರೇನಂದಾರು?" ಬಿಕ್ಕಿ ಬಿಕ್ಕಿ ಅತ್ತಳು.

ವಿಶ್ವನಾಥ ಘಟ್ಟನೆ ಎದ್ದು ಹೋಗಿ ಅವಳಿದಿರು ಅವಳಂತೆಯೇ ಕುಳಿತುಕೊಂಡ. "ಹಾಂ— ಹಾಗೆ! 'ನೀವು ಮಾಡಿದ ಹಾಗೆ ಮಾಡುವದಿಲ್ಲ' — 'ನೀವತ್ತರೆ ಅಳುವದಿಲ್ಲ' ಎಂದಿಯಲ್ಲ, ಈಗ ಹೇಗಾಯಿತು? ಹೇಂ!"

ಕಮಲ ಿಸಕ್ಕನೆ ನಕ್ಕು ಅವನನ್ನು ಹಿಂದಕ್ಕೆ ದೂಡಿಬಿಟ್ಟಳು. ವಿಶ್ವನಾಥ ಅಂಗಾತ ಬೀಳುವಾಗ 'ಹ ಹ ಹ ಹ' ಮಾಡಿದ; ಕಮಲ 'ಹಿ ಹಿ ಹಿ ಹಿ' ಅನ್ನುತ್ತಲೇ ದೂಡಿದ್ದಳು. ಈ ಬಾರಿ ಮೂರನೆಯವನೊಬ್ಬನ ನಗೆಯೂ ಅದರೊಟ್ಟಿಗೆ ಬೆರೆಯಿತು.



# ವಿಲಕ್ಷಣ ಪ್ರತೀಕಾರ

**ಶ್ರೀ ಪಿ. ದಯಾನಂದ ನಾಯಕ್**, ಬಿ ಎ , ಎಲ್ ಎಲ್ ಬಿ

★

ಕನ್ನಡದ ಅಭಿಮಾನಿಗಳಾದ ಇವರ ಕತೆಗಳು ಬೆಂಗಳೂರಿನ 'ಕತೆಗಾರ' ಪತ್ರಿಕೆಯಲ್ಲಿ ಅಚ್ಚಾಗಿವೆ. ಲ್ಯಾಸಿಯಮ್ ಗ್ರಂಥಮಾಲೆಯ ಪ್ರಥಮ ಕುಸುಮವಾದ 'ಗೋಳಿನ ಬಾಳು' ಎಂಬ ಸ್ವತಂತ್ರ ಸಾಮಾಜಿಕ ಕಾದಂಬರಿಯನ್ನು ಬರೆದವರು ಇವರೇ ಕನ್ನಡನಾಡು—ನುಡಿಗಳ ಏಳಿಗೆಯ ಬಗೆಗೆ ಶ್ರದ್ಧೆ ಯಿಂದ ಕೆಲಸಮಾಡುವ ಕೆಚ್ಚೆದೆಯ ಕನ್ನಡ ಅಭಿಮಾನಿಗಳು. ಇವರ ಶೈಲಿಯಲ್ಲಿ ಹೆಚ್ಚಿನ ಬೆಡಗು ಇಲ್ಲದಿದ್ದರೂ 'ಇಯಮಧಿಕ ಮನೋಜ್ಞಾ ವಲ್ಕಲೇನಾಪಿ ತನ್ವೀ' ಎಂಬಂತೆ ಸೊಗಸಾಗಿದೆ. ಇವರ ಕತೆಗಳೆಲ್ಲವೂ ವಸ್ತು ಪ್ರಧಾನಗಳಾಗಿವೆ ಚಮತ್ಕಾರ ವಸ್ತುವಿನಿಂದೊಡಗೂಡಿದ ಇವರ ಸಣ್ಣ ಕತೆಗಳು ಓದುಗರ ಬಗೆಗೆ ಒಪ್ಪುವಂತಿರುತ್ತವೆ. ಕತೆಯಲ್ಲಿ ಮಾನಸಿಕ ಏರಿಳಿತಗಳ ಪಡಿಯಚ್ಚನ್ನು ಚಿತ್ರಿಸಬಲ್ಲರು

ಅಪರಾಹ್ನ ಎರಡು ಗಂಟೆ ಆಗ ತಾನೆ ಹೊಡೆದಿತ್ತು. ವಿಮಲೆಯು ಹಾಸಿಗೆಯಲ್ಲಿ ಹೊರಳಾಡುತ್ತಿದ್ದಳು. ತಲೆದಿಂಬಿನಡಿಯಲ್ಲಿದ್ದ ಪತ್ರ ವೊಂದನ್ನು ಆಗಾಗ ತೆಗೆದು, ಆಮೂಲಾಗ್ರವಾಗಿ ಓದಿ, ಕಣ್ಣಿಗೂ ತುಟಿಗೂ ಒತ್ತಿ, ಪುನಃ ಅದನ್ನು ಹಿಂದಿನ ಸ್ಥಾನದಲ್ಲಿರಿಸಿ, ಪಕ್ಕಕ್ಕೆ ತಿರುಗಿ, ಸುಖ ನಿದ್ರೆಯನ್ನನುಭವಿಸುತ್ತಿದ್ದ ಮಗುವನ್ನು ಬರಸೆಳೆದು ಮುದ್ದಿಸುತ್ತಿದ್ದಳು. ಪಾಪ! ತನ್ನ ಜನಕನು ಇಂದು ಬರಲಿರುವನೆಂದು ಐದಾರು ದಿನ ಪ್ರಾಯದ ಆ ಮಗುವಿಗೆ ಹೇಗೆ ತಾನೆ ತಿಳಿಯಬೇಕು? ನಿದ್ರಾಭಂಗವಾದೊಡದೆ ಅದು ದೊಡ್ಡ ದನಿಯಿಂದ ಅಳತೊಡಗಿತು. ಅದಕ್ಕೆ ಸ್ತನ್ಯವಿತ್ತು ಅದು ನಿದ್ದೆ ಹೋದೊಡನೆ ವಿಮಲೆಯು ಪುನಃ ಪತ್ರಕ್ಕೆ ಕೈಹಾಕಿದಳು.

ಈ ಕೆಲಸಗಳಲ್ಲಿ ತಲ್ಲೀನಳಾಗಿದ್ದ ವಿಮಲೆಯ ದೃಷ್ಟಿ ಫಕ್ಕನೆ ಬಾಗಿಲ ಕಡೆ ಹೊರಳಿತು. ವಿಮಲೆಯಷ್ಟೆ ಪ್ರಾಯದ, ವಿಮಲೆಗಿಂತ ಒಂದಂಶ ಹೆಚ್ಚಿನ ಸೌಂದರ್ಯದ, ಸಾಧಾರಣ ತರದ ಸೀರೆಯುಟ್ಟ, ಸ್ತ್ರೀಯೊಬ್ಬಳು ವಿಮಲೆಯ ಈ ಹುಚ್ಚುತನವನ್ನು ಮಂದಹಾಸದಿಂದೊಡಗೂಡಿ ನೋಡು ತ್ತಿದ್ದಳು. ವಿಮಲೆಗೆ ನಾಚುಗೆಯಾದರೂ, ಅವಳು ಅದನ್ನು ತೋರಗೊಡದೆ ಆ ಸ್ತ್ರೀಯನ್ನುದ್ದೇಶಿಸಿ ನುಡಿದಳು "ಗಂಗಮ್ಮಾ, ಒಳಗೆ ಬಂದು ಕುಳಿತುಕೊ. ಹಿಂದೂ ಸ್ತ್ರೀಯರಿಗೆ ಪತಿಗಿಂತ ಶ್ರೇಷ್ಠವಾದ ಅನ್ಯ ದೈವವೊಂದಿದೆಯೆ? ಅವರ ಪತ್ರ ನಿನ್ನೆ ಬಂದಾಗಿನಿಂದಲೂ, ಪತಿದರ್ಶನಾಕಾಂಕ್ಷೆಯಿಂದ ನಾನು ಹುಚ್ಚಿಯಂತಾಗಿರುವೆನು. ಪತಿದರ್ಶನವೆಂದರೆ ಇಷ್ಟೊಂದು ಆಹ್ಲಾದದಾಯಕವಾಗಿರುವುದೇತರಿಂದ? ಹಿಂದೆ ಕ್ಷುಲ್ಲಕ ಕಾರಣದಿಂದಾಗಿ ನಾವು ಎಷ್ಟೊ ಸಲ ಜಗಳವಾಡಿದುದುಂಟು. ಮಾತುಕತೆಯಿಲ್ಲದೆ ದಿನ

ಗಟ್ಟಿಳಿ ಕಳೆದುದುಂಟು, ಅವರೊಡನೆ ಕೋಪವನ್ನು ಪ್ರದರ್ಶಿಸಿ ಮನಸ್ವೀ ಬೈದುದುಂಟು. ಆದರೆ ವಿರಹವನ್ನು ನಾನು ಸಹಿಸಲಾರೆ. ಈಗ ನನಗೆ ಹಿಂದಿನ ನನ್ನ ವರ್ತನೆಯ ಬಗ್ಗೆ ತಿರಸ್ಕಾರವೂ ಪಶ್ಚಾತ್ತಾಪವೂ ಉಂಟಾಗಿ, ಇಂದು ದೂರದಲ್ಲಿರುವ ಅವರನ್ನೊಮ್ಮೆ ಕಂಡು ಕ್ಷಮೆ ಬೇಡಬೇಕೆಂದೆ ನಿಸುತ್ತದೆ. ಆದರೂ ನಾವಿಬ್ಬರೂ ಒಂದೇ ಸ್ಥಳದಲ್ಲಿ ಸೇರಿದೆವೆಂದರೆ ಯಥಾಪ್ರಕಾರ ಮನೆಯನ್ನು ರಣರಂಗವಾಗಿ ಮಾರ್ಪಡಿಸುತ್ತೇನೆ ಗಂಗಮ್ಮಾ, ದೂರ ದೂರ ವಾಸಿಸುವಾಗ ಮೈದೋರುವ ಆ ಪ್ರೇಮವು ಒಟ್ಟಿಗಿದ್ದಾಗ ಹೀಗೆ ಮಾಯವಾಗಲು ಕಾರಣವೇನು? ಇನ್ನು ಮುಂದೆ ಅವರೊಡನೆ ಕಲಹಮಾಡುವುದಿಲ್ಲವೆಂದು ನಾನು ಪ್ರತಿಜ್ಞೆಮಾಡಿದ್ದೇನೆ. ಅವರು ಹೇಳಿದಂತೆ ಕೇಳಿ, ಅವರ ಮನಸ್ಸನ್ನು ಸಂತೋಷಗೊಳಿಸಿ, ನನ್ನ ಜನ್ಮವನ್ನು ಸಾರ್ಥಕಗೊಳಿಸಿಕೊಳ್ಳಬೇಕೆಂದು ನಿಶ್ಚಯಿಸಿದ್ದೇನೆ. ಪತಿಭಾಗ್ಯ ಕ್ಕಿಂತ ಹೆಚ್ಚಿನ ಭಾಗ್ಯವು ನಮಗಿದೆಯೆ? ಆದರೂ, ಗಂಗಮ್ಮಾ, ನೀನು ಪತಿ ಯನ್ನು ಬಿಟ್ಟು ಹೇಗೆ ತಾನೆ ದಿನಗಳೆಯಬಲ್ಲೆ? ನಿನ್ನನ್ನು ಹೀಗೆ ಪರಾವ ಲಂಬಿಯಾಗಿ ಮಾಡಿದ ನಿನ್ನ ಗಂಡನು ಪಾಷಾಣಹೃದಯನೆ ಸರಿ! ನಾನು ಹೀಗೆ ಮಾತನಾಡುವೆನೆಂದು ಕೋಪಿಸಿಕೊಳ್ಳಬೇಡ. ಇಂತಹ ಸುಗುಣಿಯೂ ಸುಂದರಿಯೂ ಆದ ನಿನ್ನ ಸಹವಾಸವನ್ನು ಕಳೆದುಕೊಂಡ ಅವನು ಪೂರ್ವ ಜನ್ಮದಲ್ಲಿ ದಂಪತಿಗಳನ್ನು ಬೇರ್ಪಡಿಸಿರಬೇಕು. ನಾನೆಣಿಸುವುದಾದರೆ ನಿನ್ನಂತಹ ನಾರೀಮಣಿಯನ್ನು ಬಡತನದಲ್ಲಿರಗೊಡಿಸಲೊಪ್ಪದವನಾಗಿ ಹಣ ಸಂಪಾದಿಸಬೇಕೆಂಬ ಇಚ್ಛೆಯಿಂದ ಅವನು ಬೊಂಬಾಯಿಗೆ ಹೋಗಿರ ಬೇಕು. ನಿನ್ನಲ್ಲಿ ನನಗೆ ಸಹೋದರೀಪ್ರೇಮವುಂಟಾಗಿದೆ. ನಿನ್ನ ಕತೆ ಯನ್ನು ಆಮೂಲಾಗ್ರವಾಗಿ ಕೇಳಬೇಕೆಂದು ನನಗಾಸೆ. ಹೇಳಲಾರೆಯಾ?"

ವಿಮಲೆಯ ಮಾತನ್ನು ಕೇಳಿ, ಉಕ್ಕಿ ಬರುತಿದ್ದ ಕಂಬನಿಯನ್ನೊರಸಿ ಕೊಳ್ಳುತ್ತ ಗಂಗಮ್ಮನು ಹೇಳತೊಡಗಿದಳು.— "ವಿಮಲಕ್ಕಾ, ನನ್ನ ಸೌಂದರ್ಯವನ್ನು ನೀನು ಹೊಗಳಿದೆಯಲ್ಲವೆ? ಅದೇ ಸೌಂದರ್ಯವು ನನ್ನ ಸರ್ವನಾಶಕ್ಕೆ ಕಾರಣವಾಯಿತೆಂದು ಹೇಳಿದರೆ ನೀನು ನಂಬುವೆಯಾ?

ನನ್ನಷ್ಟು ರೂಪವಿಲ್ಲದ ನನ್ನ ಗೆಳತಿಯರೆಷ್ಟೋ ಮುಂದೆ ಸುಖವಾಗಿ ಸಂಸಾರ ಹೂಡುತ್ತಿರುವರು. ಸೌಂದರ್ಯದ ಪಿತ್ತವು ನೆತ್ತಿಗೇರಿದ ನಾನು ಮಾತ್ರ ಪತಿಸೌಖ್ಯವಿವಂಚಿತಳಾಗಿರುವೆನು.

"ನಮ್ಮದು ಕುಂದಾಪುರ ತಾಲೂಕಿನ ಒಂದು ಹಳ್ಳಿ. ನನ್ನ ತಾಯಿಗೆ ನಾನೊಬ್ಬಳೇ ಮಗಳು ನಣ್ಣ ಪ್ರಾಯದಲ್ಲಿ ತಂದೆಯನ್ನು ಕಳೆದು ಕೊಂಡಿದ್ದ ನನ್ನನ್ನು ನನ್ನ ತಾಯಿ ಒಳ್ಳೇ ಪ್ರೀತಿಯಿಂದ ಸಾಕುತಿದ್ದಳು. ನನ್ನ ಸೌಂದರ್ಯವನ್ನು ನಮ್ಮ ಹಳ್ಳಿಯ ಸ್ತ್ರೀಯರು ಹೊಗಳುತ್ತಾ, ನನ್ನಂತಹ ರತಿಗೆ ಒಪ್ಪುವ ಮನ್ಮಥನು ಎಲ್ಲಿರುವನೊ ಎಂದು ಹೇಳುತಿದ್ದರು. ನಾನಾದರೂ ಆ ಅನಂಗರಾಜನ ಬರವನ್ನೆ ಹಾರೈಸುತ್ತ ದಿನಗಳೆಯುತಿದ್ದೆ.

"ಇಂತಹ ಸಂದರ್ಭದಲ್ಲಿ 'ಅವರು' ನಮ್ಮ ಹಳ್ಳಿಗೆ ಬಂದು ಜಮೀನುದಾರರಲ್ಲಿ ಇಳಕೊಂಡರು ಅವರು ಒಂದು ದೊಡ್ಡ ಇನ್ಶೂರು ಕಂಪೆನಿಯ ಏಜಂಟರೆಂದು ತಿಳಿದು ಬಂತು. ಅವರ ವೇಷ ಭೂಷಣಾದಿ ಗಳಿಗೂ ಸುಂದರ ರೂಪಕ್ಕೂ ನಾನು ಮನಸೋತೆ. ಅವರು ಸಹ ನನ್ನನ್ನು ವರಿಸಬೇಕೆಂಬ ಇಚ್ಛೆಯನ್ನು ವ್ಯಕ್ತಗೊಳಿಸಿದರು. ಇನ್ನೇನು ಹೇಳಲಿ? ನನ್ನ ಸ್ವರ್ಗಕ್ಕೆ ಮೂರೇ ಬೆರಳು ಉಳಿಯಿತು ಎಲ್ಲರೂ ನನ್ನ ಅದೃಷ್ಟ ವನ್ನು ಕೊಂಡಾಡುವವರೆ! ನನ್ನ ಜೊತೆಗಾರ್ತಿಯರೆಲ್ಲರೂ ನನ್ನ ಸುದೈವ ವನ್ನು ಕಂಡು ಕರುಬುವವರೆ!

"ಲಗ್ನವೂ ಬೇಗನೆ ನೆರವೇರಿತು.

"ಒಂದು ದಿನ ಸಾಯಂಕಾಲ ಅವರು ನನ್ನನ್ನು ಕರೆದು, ಪ್ರೀತಿಯಿಂದ ಬಳಿಯಲ್ಲೆ ಕುಳ್ಳಿರಿಸಿ, ನಾವು ಊರ ಹೊರಗಿನ ಗುಡಿಗೆ ಹೋಗಿ ದೇವರ ದರ್ಶನ ಪಡೆದುಕೊಂಡು ಬರಬೇಕೆಂದರು. ನಾನು ಕೂಡಲೆ ಸಮ್ಮತಿಸಿದೆ. ಹೊಸತಾಗಿ ಮದುವೆಯಾದವಳು ದೇವರ ದರ್ಶನಕ್ಕೆ ಹೋಗುವಾಗ ಚೆನ್ನಾಗಿ ಅಲಂಕರಿಸಿಕೊಳ್ಳಬೇಕೆಂದು ಅವರು ಅಭಿಪ್ರಾಯ ಪಡಲು, ನನ್ನ ಅಮ್ಮನು ನೆರೆಹೊರೆಯವರಿಂದಲೂ ಜಮೀನುದಾರರಿಂದಲೂ ಬೇಕಾದ

ಆಭರಣಗಳನ್ನೆಲ್ಲಾ ಎರವಿಗೆ ತಂದಳು. ಊರಲ್ಲಿ ಎಲ್ಲರೂ ನಮಗೆ ಬೇಕಾದವರಾದುದರಿಂದ ಕೇಳಿದ ಕೂಡಲೆ ಎಲ್ಲರೂ ಆಭರಣಗಳನ್ನು ಕೊಟ್ಟರು. ನಾನು ಅವನ್ನಿಟ್ಟುಕೊಂಡು, ಒಳ್ಳೆಯ ಸೀರೆಯನ್ನುಟ್ಟು, ಅವರೊಟ್ಟಿಗೆ ದೇವರ ದರ್ಶನಕ್ಕಾಗಿ ಹೊರಟೆ.

"ನಾವು ದೇವರ ಗುಡಿಗೆ ಹೋದಾಗ ಸೂರ್ಯನು ಅಸ್ತಮಿಸಿದ್ದ. ಮೊದಲು ಕೆರೆಯಲ್ಲಿ ಸ್ನಾನಮಾಡಬೇಕೆಂದು ಅಪ್ಪಣೆಯಾಯಿತು ಅವರು ಸ್ನಾನಮಾಡಿ ಮೇಲೆ ಬಂದು ಶಾಲನ್ನು ನನಗೆ ಕೊಟ್ಟರು. ನಾನು ಅದನ್ನುಟ್ಟು ಕೊಂಡು ಕೆರೆಗೆ ಇಳಿಯುವಷ್ಟರಲ್ಲಿ 'ಎರವಿಗೆ ತಂದ ಆ ನಗಗಳನ್ನು ಒದ್ದೆಮಾಡುವುದೇಕೆ? ತೆಗೆದು ಇತ್ತಕೊಡು. ಬೇಗನ ಸ್ನಾನಮಾಡಿ ಬಾ' ಎಂದು ಹೇಳಿದರು. ನಾನು ಪ್ರತಿಮಾತನಾಡದೆ ಆಭರಣಗಳನ್ನೆಲ್ಲಾ ಒಂದೊಂದಾಗಿ ತೆಗೆದು ಅವರ ಕೈಗಿತ್ತೆ.

"ನಾನು ಸ್ನಾನಮಾಡಿ ಮೇಲೆ ಬಂದಾಗ ಅವರು ಕಾಣಲಿಲ್ಲ ನನ್ನ ಸೀರೆಯೂ ಅಲ್ಲಿರಲಿಲ್ಲ. ಆಗ ನನಗೆ ಶ್ರೀ ಕೃಷ್ಣನು ಗೋಪಿಕಾಸ್ತ್ರೀಯರ ಸೀರೆ ಕದ್ದೊಯ್ದ ಕತೆ ನೆನಪಾಗಿ, ಶ್ರೀಕೃಷ್ಣನಂತಹ ರಸಿಕನನ್ನು ನನಗೆ ಪತಿ ಯಾಗಿ ಕರುಣಿಸಿದುದಕ್ಕಾಗಿ ಪರಮಾತ್ಮನನ್ನು ಮನಸ್ಸಿನಲ್ಲೆ ವಂದಿಸಿದೆ. 'ನನ್ನ ಸೀರೆ ಕೊಡಬಾರದೆ?' ಎಂದು ಬೇಡಿದೆ. ಪ್ರತ್ಯುತ್ತರವಿಲ್ಲ. ಶ್ರೀ ಕೃಷ್ಣನು ಮರವನ್ನೇರಿ ಕುಳಿತಿದ್ದನೆಂಬುದು ನೆನಪಾಗಲು ಮೇಲೆ ನೋಡಿದೆ. ಯಾರೂ ಇರಲಿಲ್ಲ. ಮರೆಯಾವದಲ್ಲೆಲ್ಲಾದರೂ ಅವಿತಿರಬಹು ದೆಂದು ಭಾವಿಸಿ ಹುಡುಕಾಡಿದೆ. ಎಲ್ಲೆಲ್ಲೂ ನಿರಾಶೆ ಆಗ ತಾನೆ ನನಗೆ ಫಕ್ಕನೆ ಹೊಳೆಯಿತು — ಇದರಲ್ಲೇನೋ ಮೋಸವಿರಬೇಕೆಂದು! ಎರವಿಗೆ ತಂದ ಆಭರಣಗಳಿಗೆ ಕನಿಷ್ಠಪಕ್ಷ ಐನೂರು ರೂಪಾಯಿ ಬೆಲೆ ಕಟ್ಟ ಬಹುದಿತ್ತು. ಆ ನಗಗಳೊಂದಿಗೆ ನನ್ನ ಪತಿದೇವರು ಪರಾರಿಯಾಗಿರ ಬಹುದೆಂದು ತೋಚಿದೊಡನೆ ಮೂರ್ಛೆ ಹೋದೆ.

"ಎಷ್ಟೋ ಸಮಯದನಂತರ ಎಚ್ಚರಗೊಂಡೆದ್ದು ಆ ದೇವಸ್ಥಾನದ ಪೂಜಾರಿಯ ಮನೆಗೆ ಹೋದೆ. ಅವರು ನನಗೆ ಒಂದು ಸೀರೆ ಕೊಡಿಸಿ,

ನನ್ನ ಕತೆ ಕೇಳಿ ಮರುಗಿ, ಸಮಾಧಾನಗೊಳಿಸಿ, ಮನೆಗೆ ಕಳುಹಿಸಿ ಕೊಟ್ಟರು.

"ತಂಗೀ, ಸುಂದರವಾದ ಹೂವಿನಲ್ಲಿ ಹುಳುವು ಹುದುಗಿಕೊಂಡಿದೆ ಯೆಂಬುದು ನನಗೆ ಗೊತ್ತಾದುದೆಂದು! ಅರಳಿದ ಗುಲಾಬಿಯನ್ನು ಕಿತ್ತು ತೆಗೆಯಲು ಪ್ರಯತ್ನಿಸಿದ ನನ್ನ ಕೈಯಲ್ಲಿ ಮುಳ್ಳು ಹೊಕ್ಕಿತು! ಬಾಹ್ಯ ಸೌಂದರ್ಯಕ್ಕೆ ಮನಸೋತ ನಾನು ಈ ರೀತಿ ಕಷ್ಟಕ್ಕೀಡಾದೆ.

"ವಿಮಲಾ, ಬಡವರ ಬಾಳಿನ ಗೋಳನ್ನು ಕೇಳುವವರಾರು? ನಾವು ಪೋಲೀಸರಿಗೆ ಈ ಸಂಗತಿಯನ್ನು ತಿಳಿಸಿದೆವು. ಆದರೂ ಏನೂ ಫಲ ವಿಲ್ಲದೆ ಹೋಯಿತು.

"ಕಡೆಗೆ ತಾಯಿ ಮಗಳು ನಾವಿಬ್ಬರೂ ರಾತ್ರಿ ಹಗಲೆನ್ನದೆ ದುಡಿದು ನಾಲ್ಕು ವರ್ಷದ ಅವಧಿಯಲ್ಲಿ ಆಭರಣಗಳ ಬೆಲೆ ತೆತ್ತು ಸಾಲವಿಮುಕ್ತ ರಾದೆವು. ನಾವು ಅನುಭವಿಸಿದ ಕಷ್ಟವನ್ನು ದೇವನೇ ಬಲ್ಲ! ಎಮ್ಮೆ ದನ ಗಳನ್ನು ಸಾಕಿದೆವು ಹಪ್ಪಳ, ಚಕ್ಕುಲಿ, ಉಪ್ಪಿನಕಾಯಿ ಮೊದಲಾದು ವನ್ನು ಮಾಡಿ ಮಾರಿದೆವು. ಹೀಗೆ ಕಷ್ಟವನ್ನನುಭವಿಸುತ್ತಿದ್ದಾಗಲೆ ನನ್ನಲ್ಲಿ ಪ್ರತೀಕಾರದ ಬೀಜವು ಮೊಳೆಯಿತು. ನಮ್ಮಷ್ಟಕ್ಕೆ ಮರ್ಯಾದೆಯಿಂದಿದ್ದ ನಮ್ಮನ್ನು ಈ ದುರ್ದಶೆಗೆ ತಂದೊಡ್ಡಿದ 'ಮಹಾನುಭಾವ'ರಿಗೆ ತಕ್ಕ ಶಿಕ್ಷೆ ಕೊಟ್ಟೇ ತೀರುವೆನೆಂದು ಪ್ರತಿಜ್ಞೆಮಾಡಿದೆ. ಆದರೆ ನಿಸ್ಸಹಾಯಳಾದ ಅಬಲೆ ಯಿಂದ ಅದಾಗುವ ಮಾತೆ?

"ಅವರು ಮಂಗಳೂರಿನವರೆಂದು ಕೇಳಿದ್ದೆ. ಇಲ್ಲಿಗೆ ಬಂದು ಪ್ರತೀ ಕಾರ ಸಾಧಿಸಬೇಕೆಂದು ಹವಣಿಸಿದೆ. ಆದರೆ ಇಲ್ಲಿಗೆ ಬರಲು ನನ್ನಮ್ಮ ಅನುಮತಿ ಕೊಡುವಳೆ? ಉಡುಪಿಗೆ ಹೋಗಿ ಚಿಕ್ಕಮ್ಮನನ್ನು ನೋಡಿ, ನಾಲ್ಕು ದಿನವಿದ್ದು ಬರುವೆನೆಂದು ಹೇಳಲು ಅಮ್ಮ ಒಪ್ಪಿದಳು. ನಾನು ಉಡುಪಿಯಲ್ಲಿಳಿಯದೆ ನೇರವಾಗಿ ಇಲ್ಲಿಗೆ ಬಂದುಬಿಟ್ಟೆ.

"ನಿಮ್ಮ ಈ ಮಂಗಳೂರು ಶಹರಿನ ವಿಷಯ ನಾನು ಎಷ್ಟೋ ಕೇಳಿದ್ದರೂ, ಇಲ್ಲಿಗೆ ಈ ಮೊದಲು ಬಂದಿರಲಿಲ್ಲ. ಆದುದರಿಂದ ಬಸ್ಸಿನಿಂದ ಇಳಿದೊಡನೆ ಎಲ್ಲಿಗೆ ಹೋಗುವುದು, ಏನು ಮಾಡುವುದು ಎಂದು ತಿಳಿಯದೆ, ಕಣ್ಣುಕಟ್ಟಿ ಕಾಡಿನಲ್ಲಿ ಬಿಡಲ್ಪಟ್ಟವಳಂತಾದೆ. ಗೊತ್ತುಗುರಿಯಿಲ್ಲದೆ ಅಲೆದೆ. ಒಂದು ದೇವಸ್ಥಾನದಲ್ಲಿ ಪೂಜೆಯಾಗುತಿತ್ತು. ದೇವರನ್ನು ವಂದಿಸಿ, ಪ್ರಸಾದ ಸ್ವೀಕರಿಸಿ ಹೊರಗೆ ಬಂದೆ. ಈ ವಿಶಾಲವಾದ ಪಟ್ಟಣದಲ್ಲಿ ನನ್ನನ್ನು ಕೇಳುವವರಾರು? ಇಡಿ ದಿನ ಆಹಾರವಿಲ್ಲದಿದ್ದುದರಿಂದಲೂ ನಡೆದ ಆಯಾಸದಿಂದಲೂ ಕಂಗೆಟ್ಟು ಅಲ್ಲೆ ಒಂದು ಜಗಲಿಯ ಮೂಲೆಯಲ್ಲಿ ಮಲಗಿದೆ.

"ನಾನು ಎಚ್ಚತ್ತಾಗ ಬೆಳಕು ಹರಿದಿತ್ತು. ಒಬ್ಬ ಮುದುಕ ನನ್ನ ಬಳಿಯಲ್ಲೆ ಕುಳಿತಿದ್ದು, ನನ್ನ ಹಣೆಯನ್ನು ಮುಟ್ಟಿ 'ಮಗಳೆ, ನೀನು ಯಾರು? ಇಲ್ಲೇಕೆ ಮಲಗಿರುವೆ? ನಿನ್ನ ಮೈ ಜ್ವರದಿಂದ ಕಾದ ಕೆಂಡದಂತಾಗಿದೆ. ನನ್ನೊಡನೆ ಬಾ. ನಮ್ಮ ಮನೆಗೆ ಹೋಗೋಣ' ಎಂದು ಹೇಳಿದ. ಅವನ ಪ್ರಶ್ನೆಗಳಿಗೆ ಉತ್ತರಕೊಡದೆ, ತುಂಬಾ ಕಣ್ಣೀರು ಸುರಿಸಿ, ಅವನನ್ನು ಹಿಂಬಾಲಿಸಿದೆ.

"ಅವನು ಡಾಕ್ಟರರನ್ನು ಕರೆಸಿ, ಅಹೋರಾತ್ರಿ ಶುಶ್ರೂಷೆ ಮಾಡಿದ ಫಲವಾಗಿ ನಾನು ಕ್ರಮೇಣ ಸೌಖ್ಯಹೊಂದಿದೆ. ಅವನಿಗಾರೂ ಇರಲಿಲ್ಲ. ಇದ್ದೊಬ್ಬ ಮಗಳು ಆಗ ತಾನ ಮಡಿದಿದ್ದಳು. ಹಾಗೆ ಕಳೆದುಕೊಂಡ ಮಗಳನ್ನು ದೇವರು ತನಗೆ ಪುನಃ ಕರುಣಿಸಿದನೆಂದು ಅವನು ದೇವರನ್ನು ಕೊಂಡಾಡುತಿದ್ದ. ಅನಾಥೆಯಾದ ನನಗೆ ಆಶ್ರಯವಿತ್ತ ಅವನನ್ನು ನಾನು ಪಿತನೆಂದೆ ಭಾವಿಸತೊಡಗಿದೆ.

"ನನ್ನ ಅಸ್ವಸ್ಥದಿಂದಾಗಿ ಅವನಲ್ಲಿದ್ದ ಹಣವೆಲ್ಲ ಬರಿದಾಯಿತು. ನಾನು ಎಲ್ಲಾದರೂ ಅಡುಗೆಗೆ ನಿಂತು ನಮ್ಮಿಬ್ಬರ ಪೋಷಣೆ ಮಾಡುವೆನೆಂದು ಹೇಳಿದೆ. ಒಂದು ಕಡೆ ನನಗೆ ಕೆಲಸವೂ ಸಿಕ್ಕಿತು.

“ನಾನು ಮಂಗಳೂರಿಗೆ ಬಂದ ಉದ್ದೇಶವನ್ನು ಅವನು ಕೇಳಿ ತಿಳಿದು ಕೊಂಡು ನನ್ನ ಪ್ರತೀಕಾರೇಚ್ಛೆಯನ್ನು ಬಿಟ್ಟುಬಿಡಬೇಕೆಂದು ಬೇಡಿಕೊಂಡ. ನಾನು ಅದನ್ನು ಬಿಟ್ಟೆನೆಂದು ಅವನಿಗೆ ವಚನವಿತ್ತೆ.

“ಸ್ವಲ್ಪ ಸಮಯದಲ್ಲೆ ಮುದುಕನು ಹಾಸಿಗೆ ಹಿಡಿದ. ನಾನು ಆ ಡಾಕ್ಟರರನ್ನು ಕರೆಸಿದೆ. ಒಂದೆರಡು ತಿಂಗಳು ಚಿಕಿತ್ಸೆ ನಡೆಯಿತು.

“ಒಂದು ದಿನ ಡಾಕ್ಟರರು ನನ್ನನ್ನು ಬೇರೆ ಕೋಣೆಗೆ ಕರೆದು, ‘ಬಿಲ್ಲ’ನ್ನು ತೋರಿಸಿ ಅಷ್ಟು ಹಣವನ್ನೂ ನಾವು ಯಾವಾಗ ಕೊಡುವುದೆಂದು ಕೇಳಿದರು. ಕೂಡಲೆ ಕೊಡದಿದ್ದರೆ ತಾನು ಇನ್ನು ಮುಂದೆ ಬರಲಾರೆನೆಂದು ನಿರ್ದಾಕ್ಷಿಣ್ಯವಾಗಿ ಹೇಳಿದರು ನಾನು ಕಣ್ಣೀರು ಸುರಿಸುತ್ತ ‘ಡಾಕ್ಟರರೇ, ಒಮ್ಮೆ ನನ್ನ ತಂದೆಯನ್ನು ಬದುಕಿಸಿಕೊಡಿ ಆ ಮೇಲೆ ನಾನು ಹೇಗಾದರೂ ನಿಮ್ಮ ಹಣ ಕೊಟ್ಟೇ ತೀರುವೆನು. ಬಡವರ ಮೇಲೆ ಕೃಪೆದೋರಿ’ ಎಂದು ಬೇಡಿಕೊಂಡೆ.

“ಡಾಕ್ಟರರ ಮುಖದಲ್ಲಿ ಒಂದು ಎಳನಗೆ ಮೂಡಿತು. ‘ನೀನು ಇಚ್ಛಿಸಿದರೆ, ಎಲ್ಲ ಹಣವನ್ನೂ ಕೂಡಲೆ ಏಕಗಂಟಿನಿಂದ ಕೊಡಬಲ್ಲೆ!’ ಎಂದು ಹೇಳಿ ಅರ್ಥಪೂರ್ಣದೃಷ್ಟಿಯಿಂದ ನನ್ನನ್ನೇ ನೋಡತೊಡಗಿದರು. ಅವರ ಮಾತು ನನಗೆ ಅರ್ಥವಾದರೂ, ಅದನ್ನು ಕೇಳದವಳಂತೆ ನಟಿಸಿ, ‘ಡಾಕ್ಟರರೇ, ಬಡವರನ್ನು ರಕ್ಷಿಸಿರಿ ಪರಮಾತ್ಮನು ನಿಮಗೆ ಶ್ರೇಯಸ್ಸನ್ನುಂಟುಮಾಡುವನು!’ ಎಂದೆ

“ ‘ಸುಂದರೀ, ನಿನ್ನ ಕತೆಯನ್ನು ನಾನು ಕೇಳಿರುವೆನು. ನಿನ್ನನ್ನು ವಂಚಿಸಿದ ಆ ದುರಾತ್ಮನು ಇನ್ನು ನಿನಗೆ ಸಿಗುವನೆ? ವೃಥಾ ಆಸೆ ಕಟ್ಟಿ ಕೊಂಡು ಈ ಯೌವನವನ್ನು ಹಾಳುಗೆಡವುವೆಯೇಕೆ?’ ಎಂದು ಹೇಳಿ ಡಾಕ್ಟರರು ನನ್ನ ಕೈಯನ್ನು ಹಿಡಿಯಹೋದರು.

“ನಾನು ಕೈ ಕೊಡವಿಕೊಂಡು, ಕೋಪದಿಂದ ಔಡುಗಚ್ಚಿದೆ. ಅಷ್ಟರಲ್ಲೆ ಮುದುಕನ ನಿಸ್ಸಹಾಯ ಸ್ಥಿತಿಯು ಕಣ್ಣೆದಿರು ನಿಂತಂತಾಯಿತು. ಏನು

ಮಾಡಲೆಂದು ಯೋಚಿಸತೊಡಗಿದೆ. ನನಗೆ ಪ್ರಾಣದಾನವಿತ್ತು ಮಗಳಂತೆ ಸಾಕಿ ಸಲಹಿದ ಮಹಾತ್ಮನು ಮೃತ್ಯುಶಯ್ಯೆಯಲ್ಲಿ ಮಲಗಿರುವಾಗ, ಅವ ನನ್ನು ಬದುಕಿಸಲು ಪ್ರಯತ್ನಿಸದೆ, ನಾನು ನನ್ನ 'ಧರ್ಮ!' 'ಸತೀತ್ವ!' ಎಂದೆಲ್ಲಾ ಕುಳಿತರೆ ಪರಮಾತ್ಮನು ಮೆಚ್ಚುವನೆ? ನಾನು ಯಾರಿಗಾಗಿ ನನ್ನ ಸತೀತ್ವವನ್ನು ಕಾಯ್ದುಕೊಳ್ಳಲಿ? ಕೈ ಹಿಡಿದ ಗಂಡನು ನನ್ನನ್ನು ವಂಚಿಸಿ ಸರ್ವ ನಾಶವನ್ನು ಸಾಧಿಸಿರುವಾಗ, ನಾನು ಯಾರಿಗೋಸ್ಕರ ನನ್ನ ಪಾವಿತ್ರ್ಯವನ್ನು ಕಾಪಾಡಿಕೊಳ್ಳಬೇಕು? ಹೇಗೂ ಪ್ರತೀಕಾರ ಸಾಧಿಸಿದೊಡನೆ ನಾನು ಸಾಯತಕ್ಕವಳು! ಹೀಗಿರಲು ನನ್ನ ನಡತೆಯು ಹೇಗಿದ್ದರೇನು?

“ 'ಡಾಕ್ಟರರೇ, ಬಡವರ ಮೇಲೆ ಕರುಣೆಯಿಲ್ಲವೇ?' ನಾನು ಆರ್ತ ಸ್ವರದಿಂದ ಕೇಳಿದೆ. ಡಾಕ್ಟರರಿಗೆ ಕೊಂಚ ಧೈರ್ಯ ಬಂದು, ನನ್ನ ಕೈ ಹಿಡಿದರು. ನಾನು ಆಕ್ಷೇಪಿಸದಿದ್ದುದನ್ನು ನೋಡಿ ಅವರ ಧೈರ್ಯವು ಮಿತಿಮೀರಿತು- ನಾನು ಪತಿತೆಯಾದೆ.

“ವಿಮಲಕ್ಕಾ, ನನ್ನ ಕತೆಯು ನಿನ್ನಂತಹ ಗರತಿಯರು ಕೇಳತಕ್ಕುದಲ್ಲ. ಏಕೆಂದರೆ, ಅಂತಹ ಸಂದರ್ಭದಲ್ಲಿ ನೀವು ಪ್ರಾಣವನ್ನಾದರೂ ಕೊಡು ತಿದ್ದಿರೇ ವಿನಾ ಮಾನಹಾನಿಯಾಗಗೊಡುತ್ತಿರಲಿಲ್ಲ. ಆದರೆ ಕಾರಣವೇನೋ ನಾನರಿಯೆ. ನಾನು ಅಂದು ಇಟ್ಟ ಹೆಜ್ಜೆ ತಪ್ಪೆಂದು ನನಗಿದುವರೆಗೆ ತೋರಿಲ್ಲ. ಇನ್ನಾದರೂ ತೋರಲಿಕ್ಕಿಲ್ಲ.

“ಮುದುಕನು ಕ್ರಮೇಣ ಸೌಖ್ಯವಾಗುತ್ತ ಬಂದ. ಅವನಿಗೆ ಪುಷ್ಟಿ ಕರವಾದ ಆಹಾರ ಕೊಡಲು ನನ್ನಲ್ಲೇನೂ ಉಳಿದಿರಲಿಲ್ಲ. ನಾನು ಹೇಗೂ ಮಾನಗೆಟ್ಟಿದ್ದೆ. ವಿಚಾರಿಸಿ ಬಂದ ಗಿರಾಕಿಗಳಿಗೆಲ್ಲ ದೇಹ ವಿಕ್ರಯಿಸಿ, ಕೊಂಚ ಹಣ ಸಂಪಾದಿಸಿ, ಮುದುಕನ ಶುಶ್ರೂಷೆಯಲ್ಲಿ ನಿರತಳಾದೆ.

“ಅದು ಹೇಗೊ ನನ್ನ ಈ ವರ್ತನೆಯು ಮುದುಕನಿಗೆ ತಿಳಿದೇ ಹೋಯಿತು. ಒಂದು ದಿನ ನಾನು ಅವನ ಹಾಸಿಗೆಯ ಬಳಿ ಹೋದಾಗ ಅವನ ಕಣ್ಣಿಂದ ನೀರಧಾರೆ ಸುರಿಯುತಿತ್ತು. ಅವನು ನನ್ನ ಮೈದಡವಿ,

'ಮಗಳೆ, ಇಂದೊ ನಾಳೆಯೊ ಸಾಯತಕ್ಕ ಈ ಮುದುಕನಿಗಾಗಿ ನೀನು ನಿನ್ನ ಸತೀತ್ವವನ್ನು ಮಾರಿದೆಯಾ?' ಎನ್ನುತ್ತ ಬಿಕ್ಕಿ ಬಿಕ್ಕಿ ಅಳತೊಡಗಿದ.

" 'ಅಪ್ಪಾ, ನೀನಲ್ಲದೆ ನನಗಿನ್ನಾರು ಗತಿ? ಅಂದು ನನ್ನನ್ನು ಮೃತ್ಯುವಿನ ದವಡೆಯೊಳಗಿಂದ ಬದುಕಿಸಿದೆ, ನೀನು ಸಾಯುವಂತಿರುವಾಗ ನಾನು ಬದುಕಿದ್ದೂ ಸುಮ್ಮನಿರುವೆನೆ? ಹಿಂದೆ ಆಗಿಹೋದುದನ್ನು ಕ್ಷಮಿಸಿ ಮರೆತು ಬಿಡು. ನಿನ್ನ ಪಾದಸಾಕ್ಷಿಯಾಗಿ ಹೇಳುತ್ತೇನೆ— ಇನ್ನು ನಾನು ಎಂದೆಂದಿಗೂ ಪುರುಷರ ಸಂಗಮಾಡೆನು! ಇನ್ನು ಕೆಲದಿನಗಳಲ್ಲೆ ನೀನು ಸೌಖ್ಯವಾಗುವೆ. ಆ ಮೇಲೆ ನಾನು ಪುನಃ ಎಲ್ಲಾದರೂ ಅಡುಗೆಗೆ ನಿಂತು ಯೋಗ್ಯ ರೀತಿಯಲ್ಲಿ ಜೀವನ ನಡೆಸುವೆನು.'

"ಅವನನ್ನು ಸಮಾಧಾನಗೊಳಿಸಲು ನನ್ನಿಂದಾಗಲಿಲ್ಲ. 'ಮಗೂ, ಬಹಳ ಮಹತ್ತ್ವದ ಉದ್ದೇಶದಿಂದ ನೀನು ಹೀಗೆ ಮಾಡಿರಬಹುದು. ಆದರೆ ಮಗಳ ದೇಹವಿಕ್ರಯದಿಂದಾಗಿ ಬದುಕಿದ ಈ ಜೀವವನ್ನು ಇನ್ನೆಷ್ಟು ದಿನ ತಾನೆ ಈ ದೇಹದಲ್ಲಿಟ್ಟುಕೊಂಡಿರಲಿ?' ಅವನು ಅದೆಷ್ಟೊ ಹೊತ್ತು ಗಟ್ಟಿಯಾಗಿ ರೋದಿಸಿದ.

"ಮರುದಿನದಿಂದಲೆ ಅವನ ಸ್ಥಿತಿ ಕೆಡುತ್ತ ಬಂದು ಕೆಲದಿನಗಳಲ್ಲೆ ಅವನು ಪರಲೋಕವಾಸಿಯಾದ.

"ವಿಮಲಕ್ಕಾ, ಅವನು ಸತ್ತ ಕೂಡಲೆ ನನ್ನ ಪ್ರತೀಕಾರಾಗ್ನಿಯು ಪುನಃ ಪ್ರಜ್ವಲಿಸಿತು. ಇಷ್ಟೆಲ್ಲಾ ಕಷ್ಟ ನಷ್ಟಗಳನ್ನು ಅನುಭವಿಸಿಯೂ ನಾನು ಇನ್ನೂ ಬದುಕಿರುವುದು ಈ ಸೇಡನ್ನು ತೀರಿಸುವುದಕ್ಕಾಗಿಯೇ! ಹೆಂಗಸರೆಂದರೆ ಕೇವಲ ಆಟದ ಸಾಮಾನುಗಳೆಂದು ಗಂಡಸರು ಭಾವಿಸಿರಬಹುದು. ಅವರಂತೆ ನಮಗೂ ಪ್ರಾಣವೂ, ಸುಖದುಃಖದ ಕಲ್ಪನೆಯೂ ಇರುವುವೆಂಬುದನ್ನು ಲೋಕಕ್ಕೆ ತೋರಿಸಿಕೊಡುವೆನು. 'ಅವರು' ಒಮ್ಮೆ ನನ್ನ ದೃಷ್ಟಿಗೆ ಬಿದ್ದರೆಂದರೆ, ಎಂದೆಂದಿಗೂ ನನ್ನ ಕೈಯಿಂದ ಪ್ರಾಣಸಮೇತ ತಪ್ಪಿಸಿಕೊಳ್ಳಲಾರರು!"

ಕೋಪದಿಂದ ಗಂಗಮ್ಮನ ದೇಹಾದ್ಯಂತವೂ ಕಂಪಿಸತೊಡಗಿತು; ಅವಳ ಕಂಗಳಿಂದ ಕಿಡಿಗಳುದುರತೊಡಗಿದುವು.

ವಿಮಲೆಯು "ಗಂಗಮ್ಮಾ, ಇದೇನನ್ನುತ್ತಿರುವೆ? ಪ್ರತೀಕಾರದ ಹಂಬಲವು ಅಬಲೆಯರಾದ ನಮಗೆ ಒಪ್ಪುವುದೆ? ಪಾಪಿಗಳನ್ನು ಶಿಕ್ಷಿಸುವ ಕೆಲಸವು ಪರಮಾತ್ಮನದು! ಪತಿಯು ಎಂತಹ ನೀಚನು ಬೇಕಾದರೂ ಇರಲಿ, ಅವನಿಗೆ ವಿಧೇಯಳಾಗಿ, ಅವನ ಮೇಲ್ಮೆಯನ್ನು ಹಾರೈಸುವುದೇ ಹಿಂದೂಲಲನೆಯರ ಧರ್ಮ. ಆದುದರಿಂದ, ಗಂಗಮ್ಮಾ, ನಿನ್ನ ಈ ಸೇಡಿನ ಆಸೆ ತೊರೆದು, ಈ ಜನ್ಮದಲ್ಲಿ ನಿನಗೆ ದೊರೆಯದ ಪತಿಸೌಖ್ಯವು ಮುಂದಿನ ಜನ್ಮದಲ್ಲಾದರೂ ದೊರೆಯಲೆಂದು ಪರಮಾತ್ಮನೊಡನೆ ಬೇಡಿ, ಎಲ್ಲರಿಗೂ ಶುಭವನ್ನು ಬಯಸಿ ಶೇಷಾಯುಷ್ಯವನ್ನು ಸತ್ಕಾರ್ಯದಲ್ಲಿ ವಿನಿಯೋಗಿಸು."

"ತಂಗೀ, ನೀನು ಹೇಳುವ ಮಾತು ನ್ಯಾಯಸಮ್ಮತವಾದರೂ ಅದರಂತೆ ನಡೆಯಲು ನಾನು ಸಿದ್ಧಳಿಲ್ಲದಿರುವುದಕ್ಕಾಗಿ ನನಗೆ ಬಹಳ ವಿಷಾದವೆನಿಸುತ್ತದೆ. ಸಂದರ್ಭವೊದಗಿದಾಗ ಅಬಲೆಯರು ಪ್ರಬಲೆಯ ರಾಗಿಲ್ಲವೇನು? ಮಹಿಷಾಸುರಮರ್ದಿನಿಯಾದ ಕಾಳಿಯೂ ಅಬಲೆಯೆ? ಚಾಂದಬೀಬಿ, ಮಹಾರಾಣಿ ಲಕ್ಷ್ಮೀಬಾಯಿ ಮೊದಲಾದವರೂ ಅಬಲೆ ಯರೇ? ವಿಮಲಕ್ಕಾ, ನಾನು ಸೇಡುತೀರಿಸಿಕೊಳ್ಳದೆ ಸತ್ತುದೇ ಆದರೆ ನನ್ನ ಆತ್ಮಕ್ಕೆ ಶಾಂತಿ ಸಿಗದು. ಇನ್ನು ಮುಂದೆ ನನ್ನವಸ್ಥೆಯು ನನ್ನ ಭಗಿನಿ ಯರಲ್ಲಾರಿಗೂ ಎಂದೆಂದಿಗೂ ಬಾರದಿರಲೆಂದೇ ನಾನು ಈ ಮಹತ್ಕಾರ್ಯ ವನ್ನು ಕೈಗೊಂಡಿರುವೆನು ......"

ಗೇಟಿನ ಬಳಿ ಮೋಟರ್ ಕಾರು ನಿಂತ ಶಬ್ದವಾಗಲು ವಿಮಲೆಯ ಗಂಡನು ಬಂದಿರಬಹುದೆಂದು ಭಾವಿಸಿ, ಗಂಗಮ್ಮನು ಬೇಗನೆ ಎದ್ದಳು. ಅವಳು ಹೊರಗೆ ಬರುತ್ತಿರುವಾಗಲೆ ಕಾರಿನಿಂದ ಇಳಿದು ಬಂದ ಪುರುಷನು ಅವಳ ಕಡೆಗೆ ಬರುತಿದ್ದ. ನಾಲ್ಕು ಕಣ್ಣುಗಳೂ ಸೇರಿದುವು. ಗಂಗಮ್ಮನು ಕೋಪದಿಂದ ಕೆಂಪಾಗಿ, ಔಡುಗಚ್ಚಿ, ಧರಧರ ನಡುಗಿದಳು; ಆಗಂತುಕನ ಮುಖವು ಕಳೆಗುಂದಿತು.

ಅವನು ನೇರವಾಗಿ ವಿಮಲೆಯ ಕೋಣೆ ಸೇರಿ, "ವಿಮಲಾ, ಈಗ ತಾನೆ ನಿನ್ನ ಕೋಣೆಯಿಂದ ಹೊರಗೆ ಹೋದವಳು ಯಾರು?" ಎಂದು ಕೇಳಿದ.

"ಒಹೋ! ಅವಳೇ! ನೋಡಲಿಕ್ಕೆ ಪರವಾ ಇಲ್ಲ. ಅಲ್ಲವೆ? ಅಬ್ಬಬ್ಬಾ! ಗಂಡಸರನ್ನು ನಂಬಲಿಕ್ಕೇ ಕೂಡದು. ಇಲ್ಲಿಗೆ ಬರುವಷ್ಟ ರೊಳಗೆ ಅವಳ ಮೇಲೆ ನಿಮ್ಮ ಕಣ್ಣು ಬಿದ್ದೂ ಆಯಿತು. ಅವಳ ಗಂಡನು ಅವಳನ್ನು ತ್ಯಜಿಸಿರುವನಂತೆ! ಇಂತಹ ಸ್ಥಿತಿಯಲ್ಲಿ ನಿಮ್ಮಂತಹರು ಅವಳ ಸಹಾಯಕ್ಕೆ ನಿಲ್ಲದಿದ್ದರೆ ಪಾಪ! ಆ ಅಬಲೆಯ ಗತಿಯೇನು?"

"ಸಾಕು ಸಾಕು, ನಿನ್ನ ವಿನೋದ. ಅವಳು ಇಲ್ಲಿಂದ ಹೊರಗೆ ಹೋದುದರಿಂದ ನಿನ್ನ ಗೆಳತಿಯಾಗಿರಬಹುದೆಂದು ಭಾವಿಸಿ, ಅವಳಾರೆಂದು ಕೇಳದರೆ ಇಷ್ಟೆಲ್ಲಾ ಪುರಾಣ ಬಿಚ್ಚಿದೆ."

"ಅವಳು ನನ್ನ ಬಾಣಂತಿತನಕ್ಕೆ ನಿಲ್ಲಿಸಲ್ಪಟ್ಟವಳು. ಗಂಗಮ್ಮನಂತೆ. ಮದುವೆಯಾದ ಕೂಡಲೆ ಅವಳ ಗಂಡನು ಅವಳನ್ನು ದೇವರ ಗುಡಿಗೆ ಕರೆದುಕೊಂಡು ಹೋಗಿ ಅವಳು ಕೆರೆಯಲ್ಲಿ ಸ್ನಾನಮಾಡುತ್ತಿರುವಾಗ ಅವಳ ಆಭರಣಗಳೊಂದಿಗೆ ಪರಾರಿಯಾದವನು ಇನ್ನೂ ನೋಡಲಿಕ್ಕಿಲ್ಲ ವಂತೆ! ನೀವು ಗಂಡಸರು ಏನು ಮಾಡಲಿಕ್ಕೂ ಹೇಸುವವರಲ್ಲ!"

ಗಂಡನ ಮುಖವು ಬಿಳುಪೇರಿದುದನ್ನು ವಿಮಲೆಯು ಕಂಡರೂ ಗಂಗಮ್ಮನ ಮೇಲಿನ ಮರುಕದಿಂದಾಗಿ ಹಾಗಾಗಿರಬಹುದೆಂದು ಭಾವಿಸಿ, ಆ ಮಾತನ್ನು ಅಲ್ಲಿಗೇ ನಿಲ್ಲಿಸಿ, ಪರಸ್ಪರ ಕುಶಲವಾರ್ತೆಯಲ್ಲಿ ಮಗ್ನ ಳಾದಳು.

* * * *

ಗಂಗಮ್ಮನು ಯೋಚನೆಗೀಡಾದಳು. ತನ್ನ ಸರ್ವನಾಶಕ್ಕೆ ಕಾರಣ ರಾದ 'ಮಹಾಶಯ'ರು ವಿಮಲೆಯ ಗಂಡನೆಂದು ಅವಳಿಗೆ ತಿಳಿದುಬಂತು. ಬೇಟೆಯು ತನ್ನ ಸಮೀಪ ಬಂದುದರಿಂದ ಅವಳಿಗೆ ಅಳತೆಯಿಲ್ಲದ

ಆನಂದವಾಗಿತ್ತು. ಇನ್ನು ತನ್ನ ಸೇಡನ್ನು ಯಾವ ರೀತಿಯಿಂದ ತೀರಿಸಿ ಕೊಳ್ಳುವುದೆಂದು ಯೋಚಿಸಿ, ವಿಷವಿತ್ತು ಅವನನ್ನು ಕೊಂದು, ಸಂತೋಷ ದಿಂದ ತಾನೂ ಸಾಯಬೇಕೆಂದು ನಿಶ್ಚಯಿಸಿದಳು.

ಮರುದಿನ ಅವಳು ಪೇಟೆಗೆ ಹೋಗಿ ವಿಷ ತಂದಳು. 'ಮಹಾ ಶಯ'ರು ಮಧ್ಯಾಹ್ನ ಊಟವಾದ ಕೂಡಲೆ ಎಲ್ಲಿಗೋ ಹೊರಟು ಹೋದುದ ರಿಂದ ಗಂಗಮ್ಮನ ಇಚ್ಛೆಯು ಅಂದು ನೆರವೇರಲಿಲ್ಲ.

* * * *

ಅಂದು ರಾತ್ರಿ ಮಲಗಿದಾಗ ಗಂಗಮ್ಮನು ಇದನ್ನೆ ಯೋಚಿಸ ತೊಡಗಿದಳು. ವಿಮಲೆಯ ನೀತಿವಾಕ್ಯಗಳು ಅವಳಿಗೆ ನೆನಪಾದುವು. ತಾನು ಸೇಡು ತೀರಿಸಿಕೊಂಡರೆ ವಿಮಲೆಯು ವಿಧವೆಯಾಗಿ ಇಡೀ ಜನ್ಮ ವನ್ನು ದುಃಖದಲ್ಲೆ ಕಳೆಯಬೇಕಾಗುವುದು; ಆ ನಣ್ಣ ಮಗುವು ಪರದೇಶಿ ಯಾಗುವುದು. ತಾನು ಮಾಡಬೇಕೆಂದಿದ್ದ ಕಾರ್ಯದ ಪರಿಣಾಮವನ್ನು ಯೋಚಿಸಿ ಗಂಗಮ್ಮನು ನಡುಗಿದಳು. ಅಂತಹ ಪಾಪವನ್ನು ತಾನೆಂದಿಗೂ ಮಾಡೆನೆಂದು ನಿರ್ಧರಿಸಿದಳು.

ಇಷ್ಟರಲ್ಲಿ ಅವಳ ಹೃದಯದಲ್ಲಿದ್ದ ಪ್ರತೀಕಾರಾಗ್ನಿಯು ಭುಗ್ಗೆಂ ದಿತು. ತನ್ನ ಅಂಜುಬುರುಕುತನಕ್ಕಾಗಿ ಅವಳು ನಾಚಿದಳು. ಇಂತಹ ದಿವ್ಯ ಸಂದರ್ಭವು ಇನ್ನು ಬರಲಿಕ್ಕಿಲ್ಲವೆಂಬುದನ್ನು ನೆನೆದು, ಪ್ರತೀಕಾರದ ಮಂತ್ರವನ್ನು ಜಪಿಸತೊಡಗಿದಳು.

ಆದರೆ ಅಷ್ಟರಲ್ಲೆ ವಿಮಲೆಯ ಮತ್ತು ಮಗುವಿನ ನೆನಪಾಗಿ ಅವಳ ಮನಸ್ಸು ಚಂಚಲವಾಯಿತು. ಹೀಗೆ ಇಡಿ ರಾತ್ರಿ ಅವಳ ಮನಸ್ಸಿನಲ್ಲಿ ದೊಡ್ಡ ಯುದ್ಧವು ಸಂಭವಿಸಿತು.

ಕೋಳಿ ಕೂಗುವ ಹೊತ್ತಿಗೆ ಅವಳು ಒಂದು ನಿರ್ಧಾರಕ್ಕೆ ಬಂದಳು. ಪಾಪಪುಣ್ಯಕ್ಕೆ ತಕ್ಕ ಫಲವನ್ನು ದೇವರೇ ಕೊಡುವನು; ಆದುದರಿಂದ ಎಲ್ಲ ಭಾರವನ್ನೂ ಅವನ ಮೇಲೆ ಹಾಕಿ, ಪ್ರತೀಕಾರದ ಆಸೆಯನ್ನು ತ್ಯಜಿಸ ಬೇಕು. ಆದರೆ, ಸದ್ಯಕ್ಕೆ ತಾನು ತನ್ನ ಹಂಬಲನ್ನು ತೊರೆದರೂ ಮುಂದೆ ಎಂದಾದರೂ ಸೇಡಿನ ಕಿಡಿಯು ಪ್ರಜ್ವಲಿಸಬಹುದೆಂಬ ಸಂಶಯವು ಬರಲು,

ಅಂತಹ ಸಂದರ್ಭವು ಎಂದಿಗೂ ಒದಗದಂತೆ ತಾನೆ ಆತ್ಮಹತ್ಯೆ ಮಾಡಿ ಕೊಳ್ಳಬೇಕೆಂಬುದಾಗಿ ನಿಶ್ಚಯಿಸಿದಳು.

ಅವಳು ಲಗುಬಗೆಯಿಂದೆದ್ದು ವಿಷವನ್ನು ಚರಂಡಿಯಲ್ಲಿ ಚೆಲ್ಲಿದಳು. ಸಾಯಲಿಕ್ಕೆ ದೇವಸ್ಥಾನದ ಕೆರೆಯಷ್ಟು ಸೌಕರ್ಯವು ಬೇರೆಲ್ಲೂ ಇಲ್ಲ ವೆಂದು ಅವಳು ತಿಳಿದಿದ್ದಳು. ಬೇಗಬೇಗನೆ ಹೆಜ್ಜೆಯಿಡುತ್ತ ದೇವಸ್ಥಾನ ವನ್ನು ಸೇರಿದಳು. ಅಲ್ಲಿ ಪೂಜೆಯಾಗುತಿತ್ತು. ದೇವರನ್ನು ವಂದಿಸಿ ಕೆರೆಯಬಳಿಗೆ ಹೋಗಿ ನೀರಿನಲ್ಲಿಳಿದಳು.

ನೀರು ಎದೆಯ ಮಟ್ಟಕ್ಕೆ ಬರಲು, ಅವಳು ತಾನು ಮಾಡಬೇಕೆಂದಿದ್ದ ಕಾರ್ಯಕ್ಕಾಗಿ ಹೇಸಿದಳು. ಪುರುಷವರ್ಗಕ್ಕೆ ಪಾಠಕಲಿಸಬೇಕೆಂದಿದ್ದ ತಾನು ಹೀಗೆ ಸಾಯುವುದರಿಂದ ಸ್ತ್ರೀಸಮಾಜಕ್ಕೆ ಯಾವ ಉಪಯೋಗವೂ ಇಲ್ಲ ಪುರುಷರು ಎಂದಿನಂತೆ ಸ್ತ್ರೀಯರ ಮೇಲೆ ಅನಾಚಾರ, ಅತ್ಯಾಚಾರ ಗಳನ್ನು ನಡೆಸುವರು. ತಾನು ಯಾವ ಉದ್ದೇಶದಿಂದ ಸತ್ತೆನೆಂಬುದು ಯಾರಿಗೂ ತಿಳಿಯಲಿಕ್ಕಿಲ್ಲ. 'ಯಾರೋ ಒಬ್ಬ ಸ್ತ್ರೀಯು ಕೆರೆಯಲ್ಲಿ ಕಾಲುಜಾರಿ ಮಡಿದಳೆ'ಂದು ಪತ್ರಿಕೆಗಳಲ್ಲಿ ಪ್ರಕಟವಾಗುವುದು. ಹೀಗೆ ಕುನ್ನಿಯಂತೆ ಸಾಯಲು ಅವಳ ಮನಸ್ಸೊಪ್ಪಲಿಲ್ಲ. ಪ್ರತೀಕಾರವನ್ನು ಸಾಧಿ ಸಿಯೇ ತೀರಬೇಕೆಂದು ನಿರ್ಧರಿಸಿ, ಕೆರೆಯಿಂದ ಮೇಲೆ ಬಂದು, ಸೀರೆ ಯನ್ನು ಹಿಂಡಿ, ಮೈಯನ್ನು ಒರೆಸಿ, ಆ ಒದ್ದೆ ಸೀರೆಯನ್ನುಡತೊಡಗಿದಳು

ಉಷಃಕಾಲದ ತಂಗಾಳಿಯು ತೀಡತೊಡಗಲು, ಚಳಿಯಿಂದ ಅವಳಿಗೆ ನಡುಕವುಂಟಾಯಿತು. ಅದೇ ಸಮಯದಲ್ಲಿ ಅವಳ ಕಲ್ಪನೆ ಯೆಂಬ ಪರದೆಯಲ್ಲಿ ನಿರ್ಗತಿಕವಾದಾ ಮಗುವಿನೊಂದಿಗೆ ವಿಧವೆಯಾದ ವಿಮಲೆಯ ದೀನಚಿತ್ರವು ಕಾಣಿಸಿಕೊಂಡಿತು. ಅವಳು ಕೈಮುಗಿದು, 'ದೇವಾ, ನಾನೆಂದಿಗೂ ಇಂತಹ ಘೋರಕೃತ್ಯವನ್ನು ಮಾಡಲಾರೆ! ನನಗೆ ಆತ್ಮಹತ್ಯಾದೋಷವು ತಟ್ಟದಂತೆ ಕರುಣಿಸು. ನನ್ನ ಪ್ರತೀಕಾರಾಗ್ನಿಯಲ್ಲಿ ನಾನೇ ಆತ್ಮ ಸಮರ್ಪಣೆ ಮಾಡುವೆನು" ಎಂದು ಹೇಳಿ ಕಣ್ಣು ಮುಚ್ಚಿ ವೇಗವಾಗಿ ಕೆರೆಯನ್ನು ಹೊಕ್ಕಳು.

---